# ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ-ಆರ್ಥಿಕ ಅಧ್ಯಯನ

(ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಪ್ರಬಂಧ


ಸಂಶೋಧಕ

ಶಶಿಧರ ಮಲ್ಲಪ್ಪ

ಮಾರ್ಗದರ್ಶಕರು

ಡಾ. ಎನ್. ಚಿನ್ನಸ್ವಾಮಿ ಸೋಸಲೆ

ಪ್ರವಾಚಕರು







ಸಮಾಜ ವಿಜ್ಞಾನಗಳ ನಿಕಾಯ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೬-೦೭

# ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ-ಆರ್ಥಿಕ ಅಧ್ಯಯನ

(ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಪ್ರಬಂಧ

ಸಂಶೋಧಕ
ಶಶಿಧರ ಮಲ್ಲಪ್ಪ



ಮಾರ್ಗದರ್ಶಕರು
ಡಾ. ಎನ್. ಚಿನ್ನಸ್ವಾಮಿ ಸೋಸಲೆ
ಪ್ರವಾಚಕರು






ಸಮಾಜ ವಿಜ್ಞಾನಗಳ ನಿಕಾಯ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೬-೦೭

## ಮಾರ್ಗದರ್ಶಕರ ಪ್ರಮಾಣ ಪತ್ರ

**ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ-ಆರ್ಥಿಕ ಅಧ್ಯಯನ (ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕನ್ನು ಅನುಲಕ್ಷಿಸಿ)** ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಶಶಿಧರ ಮಲ್ಲಪ್ಪ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಪ್ರಬಂಧವನ್ನು ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲ ಎಂಬುದನ್ನು ದೃಢೀಕರಿಸುತ್ತೇನೆ.

**ಡಾ.ಎನ್.ಚಿನ್ನಸ್ವಾಮಿ ಸೋಸಲೆ**
ಪ್ರವಾಚಕರು ಹಾಗೂ ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 30.07.07
ಸ್ಥಳ : ವಿದ್ಯಾರಣ್ಯ

## ಪ್ರಮಾಣ ಪತ್ರ

**ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ-ಆರ್ಥಿಕ ಅಧ್ಯಯನ (ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕನ್ನು ಅನುಲಕ್ಷಿಸಿ)** ಎಂಬ ಪ್ರಬಂಧವನ್ನು ಚರಿತ್ರೆ ವಿಭಾಗದಲ್ಲಿ ಪ್ರವಾಚಕರಾಗಿರುವ ಡಾ.ಎನ್.ಚಿನ್ನಸ್ವಾಮಿ ಸೋಸಲೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Shashidhar

**ಶಶಿಧರ ಮಲ್ಲಪ್ಪ**
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 30/07/07
ಸ್ಥಳ : ವಿದ್ಯಾರಣ್ಯ

# ಕೃತಜ್ಞತೆಗಳು

ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ ಆರ್ಥಿಕ ಅಧ್ಯಯನ (ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕನ್ನು ಅನುಲಕ್ಷಿಸಿ) ಕನ್ನಡ ವಿಶ್ವವಿದ್ಯಾಲಯ ಎಂ.ಫಿಲ್ ಪದವಿ ಮಾಡಲು ಅವಕಾಶ ಕಲ್ಪಿಸಿಕೊಟ್ಟ ಕುಲಪತಿಗಳಾಗಿದ್ದ ಡಾ.ಬಿ.ಎ.ವಿವೇಕ ರೈ ಹಾಗೂ ಕುಲಪತಿಗಳಾಗಿರುವ ಡಾ.ಕೆ.ವಿ.ನಾರಾಯಣ ಹಾಗೂ ಕುಲಸಚಿವರಾದ ವಿ.ಶಂಕರ ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಅಧ್ಯಯನ ಕೈಗೊಳ್ಳಲು ಆಡಳಿತಾತ್ಮಕ ಅನುಮತಿ ನೀಡಿದ ಅಧ್ಯಯನಾಂಗದ ನಿರ್ದೇಶಕರಾಗಿದ್ದ ಡಾ.ಟಿ.ಆರ್.ಚಂದ್ರಶೇಖರ್ ಅವರಿಗೆ, ನಿರ್ದೇಶಕರಾಗಿರುವ ಡಾ.ಡಿ.ಪಾಂಡುರಂಗ ಬಾಬು ಅವರಿಗೆ ಹಾಗೂ ಚರಿತ್ರೆ ವಿಭಾಗದ ಮುಖ್ಯಸ್ಥರಾಗಿರುವ ಡಾ.ಮೋಹನಕೃಷ್ಣ ರೈ ಅವರಿಗೆ, ಲಲಿತಕಲೆಗಳ ನಿಕಾಯದ ಡೀನ್ ಡಾ.ಹನುಮಣ್ಣನಾಯಕ ದೊರೆ ಅವರಿಗೆ, ಮತ್ತು ರಮೇಶ ನಾಯಕ ಅವರಿಗೆ ನನ್ನ ವಂದನೆಗಳನ್ನು ಸಲ್ಲಿಸುವೆ.

ನನಗೆ ಪ್ರಬಂಧದ ವಿಷಯ ಹಾಗೂ ಅಧ್ಯಯನ ಕ್ರಮಗಳನ್ನು ಭೋದಿಸಿ ಪ್ರೀತಿಯಿಂದ ನನ್ನನ್ನು ಪ್ರೋತ್ಸಾಹಿಸಿ ಸೂಕ್ತ ಸಲಹೆ, ಸೂಚನೆ ಪ್ರೇರಣೆಗಳ ಮೂಲಕ ಮಾರ್ಗದರ್ಶನ ಮಾಡಿದ ಡಾ.ಎನ್.ಚಿನ್ನಸ್ವಾಮಿ ಸೋಸಲೆ ಅವರಿಗೆ ನನ್ನ ವಂದನೆಗಳು. ಅಧ್ಯಯನದ ಸಂದರ್ಭದಲ್ಲಿ ಸಲಹೆ ಸೂಚನೆಗಳನ್ನು ನೀಡಿ ಪ್ರೋತ್ಸಾಹಿಸಿರುವ ಪ್ರೊ.ಲಕ್ಷ್ಮಣ್ ತೆಲಗಾವಿ. ಡಾ.ತಂಬಂಡ ವಿಜಯ ಪೂಣಚ್ಚ, ಡಾ.ಸಿ.ಆರ್.ಗೋವಿಂದರಾಜು, ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ವಿಷಯಕ್ಕೆ ಸಂಬಂಧಪಟ್ಟ ಮಾಹಿತಿಗಳನ್ನು ನೀಡಿದ ತಹಶೀಲ ಕಾರ್ಯಾಲಯದ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರಿಗೂ ನನ್ನ ಧನ್ಯವಾದಗಳು.

ನನ್ನ ಶೈಕ್ಷಣಿಕ ಪ್ರಗತಿಯನ್ನು ಬಯಸುತ್ತಿರುವ ಪೂಜ್ಯ ತಂದೆ ತಾಯಿಯವರಾದ ಮಲ್ಲಪ್ಪ ಮತ್ತು ಮಲ್ಲಮ್ಮರವರಿಗೆ ಪ್ರಣಾಮಗಳು. ನನ್ನ ಶ್ರೇಯಸ್ಸನ್ನು ಬಯಸುತ್ತಿರುವ ಮಾವ ಕೆ.ರಾಮಾಂಜಿನೆಯ, ಅಕ್ಕ ಉಮಾದೇವಿ ಹಾಗೂ ಅಣ್ಣಂದಿರಾದ ನಾಗರಾಜ. ಚಂದ್ರಶೇಖರ್, ತಮ್ಮಂದಿರಾದ ಮಹೇಶ್, ಕೃಷ್ಣ, ವಿನಯಕುಮಾರ, ರಾಘವೇಂದ್ರ, ಸಹೋದರಿಯರಾದ ರೇಣುಕಾದೇವಿ, ನಾಗರತ್ನ ಹಾಗೂ ಚಿಕ್ಕಪ್ಪ ಚಿಕ್ಕಮ್ಮರುಗಳಾದ ಲಕ್ಷ್ಮಣ, ಹುಸೇನಮ್ಮ, ಶಿವಪ್ಪ, ಮಾನಸಮ್ಮ, ರಾಮಣ್ಣ, ಶಿವಮ್ಮ ಅವರಿಗೆ ಪೂಜ್ಯ ಪ್ರಣಾಮಗಳು. ನನ್ನ ಶ್ರೇಯಸ್ಸನ್ನು ಬಯಸುವ ಅಜ್ಜಿಯಾದ ಹಸನಮ್ಮನವರಿಗಿ ಪೂಜ್ಯ ವಂದನೆಗಳು.

ಪುಸ್ತಕ ಸೌಲಭ್ಯ ಒದಗಿಸಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯದ ಮುಖ್ಯಗ್ರಂಥಪಾಲಕರಾದ ಡಾ.ರಾಧಾಕೃಷ್ಣನ್, ಉಪಗ್ರಂಥಪಾಲಕರಾದ ಡಾ.ಎಚ್.ನಾಗವೇಣಿ ಮತ್ತು ಸಿಬ್ಬಂದಿ ವರ್ಗದ ಸಹಕಾರವನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ.

ಸ್ನೇಹಿತರಾದ ನಾಗರಾಜ, ಅಜೀಂ ಫಾಷ, ಫೀರೋಜ್, ಸಂಶೋಧನ ಸಹಪಾಠಿಗಳಾದ ರಾಮ್ ಕಲಾಲ, ಹಣಮಂತ್ರಾಯ, ಓ.ದೇವರಾಜ, ಹೊಳಿಬಸಪ್ಪ, ಡಿ.ಓಬಯ್ಯ, ಗಾದೆಪ್ಪ, ಜಗದೀಶ್‌ಕುಮಾರ್, ಎ.ಡಿ.ಬಸವರಾಜ, ಎಂ.ಎಸ್.ಪಾಟೀಲ್, ಮೋಹನ್, ಆರ್.ಲೋಹಿತ್ ಕುಮಾರ್, ತಿಪ್ಪೇಸ್ವಾಮಿ, ಶಶಿಕಾಂತ ಬಿಲ್ಲವ, ವಿಮಲಾ ಬಿಲ್ಲವ, ಮಲ್ಲಿಕಾರ್ಜುನ, ಮೇಘನಾಥ ಇಬ್ರಾಹಿಂ, ಸತ್ಯವತಿ ಹಾಗೂ ಶ್ರೀಮತಿ ಮಧು ಅವರುಗಳಿಗೆ ಧನ್ಯವಾದಗಳು.

ಚರಿತ್ರೆ ವಿಭಾಗದ ಸಿಬ್ಬಂದಿ ಸೋಮಶೇಖರ್ ಕಣವಿ ಹಾಗೂ ಗಂಗಾಧರ್ ಅವರನ್ನು ನೆನೆಯುತ್ತೇನೆ.

ಪ್ರೀತಿಯಿಂದ ಅಕ್ಷರ ಸಂಯೋಜಿಸಿಕೊಟ್ಟ ಫಾಂಟ್‌ಲೈನ್ ಗ್ರಾಫಿಕ್ಸ್‌ನ ಜಿ.ಉಲ್ಲಾಸ್ ಹಾಗೂ ಸಿ.ಬಸವರಾಜು ಅವರಿಗೆ ಕೃತಜ್ಞತೆಗಳು.

ಶಶಿಧರ್ ಮಲ್ಲಪ್ಪ

# ಪರಿವಿಡಿ

# ಅಧ್ಯಾಯ ಒಂದು

## ಪ್ರವೇಶ

೧.೧ ಅಧ್ಯಯನದ ಉದ್ದೇಶ ಹಾಗೂ ಮಹತ್ವ

೧.೨ ವ್ಯಾಪ್ತಿ

೧.೩ ದೇವದುರ್ಗ ತಾಲೂಕಿನ ಐತಿಹಾಸಿಕ ಹಿನ್ನೆಲೆ

# ಅಧ್ಯಾಯ ಒಂದು

## ಪ್ರವೇಶ

ಪ್ರಾಚೀನ ಕಾಲದಿಂದಲೂ ನಾಗರಿಕತೆಯು ಹುಟ್ಟು ಮತ್ತು ಬೆಳವಣಿಗೆಗೆ ನದಿಗಳ ಪಾತ್ರ ಅತ್ಯಂತ ಮಹತ್ವದ್ದಾಗಿದೆ. ಮಾನವನು ಪ್ರಬುದ್ಧನಾದಂತೆ ನದಿದಡದ ಬಯಲು ಪ್ರದೇಶದಲ್ಲಿ ನೆಲೆನಿಂತನು. ಆ ಫಲವತ್ತಾದ ಭೂ ಪ್ರದೇಶದಲ್ಲಿಯೇ ಆಹಾರದ ಉತ್ಪಾದನೆಯನ್ನು ಕಂಡುಕೊಂಡನು. ಹಾಗೆಯೇ ಅನಾಗರಿಕತೆಯಿಂದ ನಾಗರಿಕತೆಯೆಡೆಗೆ ಸಾಗತೊಡಗಿದಂತೆ ಧಾರ್ಮಿಕ ಕೇಂದ್ರ, ವಾಣಿಜ್ಯ ಕೇಂದ್ರ, ನಗರ ಕೇಂದ್ರಗಳ ಉದಯಕ್ಕೆ ನದಿಮುಖಜ ಭೂ ಪ್ರದೇಶವು ಬಹು ಮುಖ್ಯ ಕೇಂದ್ರವಾಯಿತ್ತು.

ಉತ್ತರ ಭಾರತದ ನದಿಗಳಾದ ಸಿಂಧೂ. ಗಂಗಾ. ಬ್ರಹ್ಮಪುತ್ರ ಮುಂತಾದ ನದಿಗಳು ಹಾಗೂ ದಕ್ಷಿಣ ಭಾರತದ ಕಾವೇರಿ, ಕಪಿಲೆ, ತುಂಗಭದ್ರಾ, ಭೀಮಾ, ಕೃಷ್ಣಾ ಮೊದಲಾದ ನದಿಗಳು ಈ ಮೇಲಿನ ಅಂಶವನ್ನು ಪುಷ್ಟಿಕರಿಸುತ್ತವೆ. ಹೀಗಾಗಿ ಈ ನದಿಗಳು ಯಾವ ರೀತಿ ನಾಗರಿಕತೆಯ ಹುಟ್ಟುವಿಗೆ ಕಾರಣವಾಗಿವೆಯೇ ಹಾಗೆಯೇ ವಿನಾಶಕ್ಕೂ ಕಾರಣವಾಗಿವೆ. ಕಾಲದಿಂದ ಕಾಲಕ್ಕೆ ಸಂಭವಿಸುವ ಪ್ರವಾಹ, ಬರಗಾಲ, ಭೂಕಂಪ, ಜ್ವಾಲಾಮುಖಿ, ಬಿರುಗಾಳಿ ಇವೇ ಮೊದಲಾದ ಭೌಗೋಳಿಕ ಅಥವಾ ನೈಸರ್ಗಿಕ ವಿಕೋಪಕಾರಿ ಸಂಗತಿಗಳು ಮಾನವನ ಜೀವನದ ನಾಗರಿಕತೆಯ ಮೇಲೆ ಸಾಕಷ್ಟು ಪ್ರಭಾವ ಬೀರಿವೆ.

ಕೃಷ್ಣಾನದಿಗೆ ಆಲಮಟ್ಟಿ ಬಳಿ ನಿರ್ಮಿಸಿರುವ ಅಣೆಕಟ್ಟಿನಿಂದ ಸಂಪೂರ್ಣವಾಗಿ ಐತಿಹಾಸಿಕ ಬಾಗಲಕೋಟೆ ನಗರವು ಮುಳುಗಡೆಯಾಯಿತ್ತು. ಐತಿಹಾಸಿಕ ಹಾಗೂ ಚಾರಿತ್ರಿಕವಾಗಿ ಪ್ರಸಿದ್ಧಿ ಪಡೆದಿದ್ದ ಬಾಗಲಕೋಟೆ ನಗರವು ಮುಳುಗಡೆಯಾದುದರಿಂದ ಈ ಭಾಗದ ಜನರಿಗೆ ಪರ್ಯಾಯವಾಗಿ ಪಕ್ಕದಲ್ಲಿ ನವ ನಗರವೆಂಬ ನೂತನ ನಗರವನ್ನು ನಿರ್ಮಿಸಲಾಗಿದೆ. ಅತ್ಯಾಧುನಿಕ ನಾಗರಿಕ ಸೌಲಭ್ಯಗಳನ್ನು ಪಡೆದಿರುವ ರೀತಿಯಲ್ಲಿ ನಿರ್ಮಿಸಲು ಉದ್ದೇಶಿಸಲಾಗಿದೆ.[1]

ಹೀಗಾಗಿ ನೈಸರ್ಗಿಕ ವಿಕೋಪದಿಂದ ನದಿಗಳು ಉಕ್ಕಿಹರಿದು ಪ್ರವಾಹ ಉಂಟಾಗಿ, ಅಲ್ಲಿದ್ದ ನಾಗರೀಕತೆ ಸಂಸ್ಕೃತಿ ನಾಶವಾಗಿ ಕಾಲಗರ್ಭದಲ್ಲಿ ಉದುಗಿಹೋದ ಎಷ್ಟೋ ನಿದರ್ಶನಗಳು ಚರಿತ್ರೆಯ ಪುಟಗಳಲ್ಲಿ ಸೇರಿವೆ. ನದಿ ಪರಿಸರದಲ್ಲಿ ಆಳಿಬಾಳಿದ ಅರಸರು ಪಾಳ್ಯಾಗಾರರುಗಳು ವ್ಯವಸಾಯಕ್ಕೆ ಅನುಕೂಲವಾಗಲು ಹರಿಯುವ ನದಿ ನೀರಿಗೆ ಅಣೆಕಟ್ಟುಗಳನ್ನು ಹಾಗೂ ಕೆರೆಕಟ್ಟೆಗಳನ್ನು ನಿರ್ಮಿಸಿರುವುದನ್ನು ಚರಿತ್ರೆಯಿಂದ ತಿಳಿಯಬಹುದಾಗಿದೆ. ನದಿಗಳಿಗೆ ಅಣೆಕಟ್ಟು ಕಟ್ಟುವದರಿಂದ ಮಾನವನು ಬಹುಮುಖ್ಯವಾದ ವಿದ್ಯುತ್ ಉತ್ಪಾದನೆ ಕಂಡುಕೊಂಡನು. ವಿದ್ಯತ್ ಇಂದು ಜಗತ್ತನ್ನೆ ಒಂದುಮಾಡಿದೆ. ಅಂಥಹ ಅಣೆಕಟ್ಟುಗಳಲ್ಲಿ ಕೃಷ್ಣರಾಜ ಸಾಗರ, ಘಟಪ್ರಭ, ಮಲಪ್ರಭ ಮತ್ತು ತುಂಗಭದ್ರ ಅಣೆಕಟ್ಟುಗಳಲ್ಲದೆ, ೧೯೬೪ರಲ್ಲಿ ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿಬಳಿಯ ಆಲಮಟ್ಟಿ ಎಂಬಲ್ಲಿ ಅಣೆಕಟ್ಟೆ ನಿರ್ಮಾಣ ಮಾಡಲಾಯಿತ್ತು. ಹಾಗೂ ಗುಲ್ಬರ್ಗ ಜಿಲ್ಲೆ. ಸುರಪುರ ತಾಲ್ಲೂಕಿನ ಸಿದ್ಧಾಪುರ ಬಳಿಯ ನಾರಾಯಣಪುರ ಎಂಬಲ್ಲಿ ಅಣೆಕಟ್ಟು ನಿರ್ಮಿಸಲು ಯೋಜನೆಗಳನ್ನು ಪ್ರಾರಂಭಿಸಲಾಯಿತು. ಈ ಎರಡು ಮಹತ್ವದ ಮೇಲ್ದಂಡೆ ಯೋಜನೆಗಳು ವಿವಿಧೋದ್ದೇಶ ಯೋಜನೆಗಳಾಗಿದ್ದು. ಕೃಷಿ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸುವುದರ ಜೊತೆಗೆ ವಿದ್ಯುತ್ ಉತ್ಪಾದನೆಯಲ್ಲಿ ಮಹತ್ವ ಪಾತ್ರ ವಹಿಸಿವೆ.

ಒಟ್ಟಿನಲ್ಲಿ ಅಣೆಕಟ್ಟುಗಳನ್ನು ನಿರ್ಮಿಸುವುದರಿಂದ ಪ್ರಗತಿ ಮತ್ತು ಹಾನಿ ವಿಷಯಕ್ಕೆ ಸಂಬಂಧಿಸಿದಂತೆ, ಚಾರಿತ್ರಿಕ ಹಿನ್ನೆಲೆಯಲ್ಲಿ ನೋಡುವುದಾದರೆ. ಪ್ರಾಚೀನ ಕಾಲದಿಂದಲೂ ಪ್ರವಾಹ ಸಂದರ್ಭದಲ್ಲಿ ಜನಸಾಮಾನ್ಯರು ಸಾಕಷ್ಟು ಕಷ್ಟ-ನಷ್ಟಗಳನ್ನು ಅನುಭವಿಸಿರುವುದು ಸರ್ವೆಸಾಮಾನ್ಯವಾಗಿದೆ.

ಆಧುನಿಕ ಕಾಲದಲ್ಲಿ ಅಣೆಕಟ್ಟುಗಳನ್ನು ನಿರ್ಮಿಸುವ ಸಂದರ್ಭದಲ್ಲಿ ಅನೇಕ ಹಳ್ಳಿಗಳು ಮುಳುಗಡೆಯಾಗಿ ಜನರು ಕಂಗಾಲಾಗಿರುವುದು ಕಂಡುಬರುತ್ತದೆ. ಹೀಗೆ ಪ್ರವಾಹ ಸಂದರ್ಭದಲ್ಲಿ ಪುನರ್ ವಸತಿ, ಆರೋಗ್ಯ, ಶೈಕ್ಷಣಿಕ ಸಮಸ್ಯೆಗಳನ್ನು ನದಿಭಾಗದ ಜನರು ಅನುಭವಿಸುವಂತಾಗಿದೆ. ಕೃಷ್ಣಾನದಿ ಪ್ರವಾಹದಿಂದ ಅನೇಕ ಗ್ರಾಮಗಳು ಮುಳುಗಡೆಯಾಗಿ ಹೊರ ಜಗತ್ತಿನ ಸಂಪರ್ಕವನ್ನೇ ಕಳೆದುಕೊಂಡು ದ್ವೀಪದಂತೆ ಆಗಿರುವುದನ್ನು ನಾವು ಕಾಣಬಹುದಾಗಿದೆ. ಈ ದೃಷ್ಟಿಯಲ್ಲಿ ಇತ್ತೀಚಿನ ಪ್ರವಾಹದ ಭೀಕರತೆಯು (೨೦೦೫-೦೬ರ) ಭಿನ್ನವಾಗೇನು ಕಂಡುಬರುವುದಿಲ್ಲ. ಪ್ರವಾಹದಿಂದ ಈ ಭಾಗದ ಜನರು ಆರ್ಥಿಕ ನಷ್ಟದ ಬಾಧೆಯಷ್ಟೇ ಅಲ್ಲದೆ ಪುನರ್ ವಸತಿ, ಶೈಕ್ಷಣಿಕ, ಆರೋಗ್ಯ ಮತ್ತು ಸಾಮಾಜಿಕ ಸಮಸ್ಯೆಗಳಿಂದ ನರಳುತ್ತಿದ್ದಾರೆ.

ಇನ್ನೂ ಇಂಥ ಹಲವಾರು ಸಮಸ್ಯೆಗಳ ಸುಳಿಯಲ್ಲಿ ಸಿಲುಕಿ ಪರದಾಡುತ್ತಿರುವ ಜನ ಜೀವನದ ನಿರ್ವಹಣೆಗಾಗಿ ನಂಬಿ ಬದುಕುತ್ತಿದ್ದ ಕೃಷಿ ಭೂಮಿ ಪ್ರವಾಹದಲ್ಲಿ ಕೊಚ್ಚಿಹೋದುದರಿಂದ ಬದುಕಿನ ಕೊಂಡಿಯೇ ಕಳಚಿಹೋಗಿರುವುದು ಕಂಡುಬರುತ್ತದೆ. ಸರ್ಕಾರವು ಮುಳುಗಡೆಯಾದ ಪ್ರದೇಶದ ರೈತಾಪಿಜನರ ಬಗ್ಗೆ ಹೆಚ್ಚಿನ ಗಮನ ಹರಿಸಿ ಪುನರ್ ವಸತಿ ಸೌಕರ್ಯವನ್ನು ಕಲ್ಪಿಸುವುದರ ಜೊತೆಗೆ ಸಕಾಲದಲ್ಲಿ ಪರಿಹಾರ ಲಭಿಸುವಂತೆ ಕಾರ್ಯಗಳನ್ನು ತ್ವರಿತಗತಿಯಲ್ಲಿ ಮಾಡಬೇಕಿದೆ. ಅಧ್ಯಯನದಲ್ಲಿ ದೇವದುರ್ಗ ತಾಲೂಕಿನ ಮುಳುಗಡೆಯಾದ ಗ್ರಾಮಗಳ ಚಿತ್ರಣವನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

ಈ ಅಧ್ಯಯನದಲ್ಲಿ ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ದೇವದುರ್ಗ ತಾಲೂಕಿನ ಗ್ರಾಮಗಳನ್ನು ಅಧ್ಯಯನಿಸುವದರ ಜೊತೆಗೆ ಕೃಷ್ಣಾನದಿಯ ವೈಶಿಷ್ಟ್ಯತೆ ಮತ್ತು ಪರಂಪರೆಯನ್ನು ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಕೃಷ್ಣಾನದಿಯು ಸುಮಾರು ಎರಡು ಸಾವಿರ ವರ್ಷಗಳಷ್ಟು ಪ್ರಾಚೀನವಾಗಿದೆ. ಕ್ರಿ.ಪೂ ಒಂದನೆ ಶತಮಾನದಲ್ಲಿ ಚೇದಿ ರಾಜ್ಯ (ಕಳಿಂಗ ಪ್ರದೇಶ)ವನ್ನು ಆಳುತ್ತಿದ್ದ ಮಹಾಮೇಘನಾಥನ ವಂಶದ ಖಾರವೇಲ ರಾಜ್ಯದ ಒಂದು ಪ್ರಾಕೃತ ಭಾಷೆಯಲ್ಲಿರುವ ಶಾಸನದಲ್ಲಿ ಈ ನದಿಯ ಹೆಸರು ಕೃಷ್ಣವೇಣಾ ಎಂದಿದೆ. ಇದು ಸಂಸ್ಕೃತದಲ್ಲಿ ಕೃಷ್ಣವೇಣಿ ಎಂದು ಸೂಚಿಸುತ್ತದೆ.

ಕೃಷ್ಣಾನದಿಯು ಅರಬ್ಬೀ ಸಮುದ್ರದಿಂದ ೬೪ ಕಿ.ಮೀ. ದೂರದ ಪಶ್ಚಿಮ ಘಟ್ಟದಲ್ಲಿ ಮಹಾಬಲೇಶ್ವರದ ಬಳಿ ಉತ್ತರದಲ್ಲಿ ೧೩೩೬.೫ ಕಿ.ಮೀ ಎತ್ತರದಲ್ಲಿ ಜನಿಸಿ ಪಶ್ಚಿಮದಿಂದ ಪೂರ್ವಕ್ಕೆ ೧೪೦೦ ಕಿ.ಮೀ ಹರಿದು ಮಹಾರಾಷ್ಟ್ರ, ಕರ್ನಾಟಕ ಮತ್ತು ಆಂಧ್ರಪ್ರದೇಶದ ಮೂಲಕ ಹರಿದು ಬಂಗಾಳಕೊಲ್ಲಿ ಸೇರುತ್ತದೆ. ನೀರು ಬುಗ್ಗೆ ಮಹಾಬಲೇಶ್ವರದಲ್ಲಿ ಹುಟ್ಟಿ ಕಡಿದಾದ ಬೆಟ್ಟದ ತಪ್ಪಲಿನಲ್ಲಿರುವ ಪುರಾತನ ಮಹಾದೇವ ದೇವಾಲಯದಲ್ಲಿ ಹಸುವಿನ ಬಾಯಿಯಂತಿರುವ ವಿಗ್ರಹದ ಮೂಲಕ ಧಾರೆಯಾಗಿ ಹರಿಯುತ್ತದೆ. ಕೃಷ್ಣಾನದಿಯನ್ನು ವಿಷ್ಣು ತನ್ನ ಶರೀರದಿಂದ ಸೃಷ್ಟಿಸಿ ಅದ್ಭುತ ಶಕ್ತಿಯನ್ನು ಅದರಲ್ಲಿ ಕ್ರೋಢಿಕರಿಸಿದ ಕಾರಣ ನದಿಗೆ ವಿಷ್ಣುವಿನ ಅವತಾರವಾದ ಕೃಷ್ಣ ಎಂದು ಹೆಸರು ಬಂದಿತು ಎಂದು ಪುರಾಣ ಕಥೆಗಳಲ್ಲಿ ಬರುತ್ತದೆ.

ಕೃಷ್ಣಾನದಿ ಕಣಿವೆಯ ಪ್ರದೇಶವು ೨,೫೯,೦೦೦ ಚ.ಕಿ.ಮೀ ವಿಸ್ತೀರ್ಣವಾಗಿದ್ದು,[೨] ಆಗ್ನೇಯಕ್ಕೆ ಹರಿಯುತ್ತಾ ಬಂದು ಕರ್ನಾಟಕದ ಬೆಳಗಾಂ ಜಿಲ್ಲೆಯ ಮಂಗಾವತಿ ಎಂಬ ಹಳ್ಳಿಯಿಂದ ಪೂರ್ವಾಭಿಮುಖವಾಗಿ ಹರಿಯುತ್ತದೆ.[೩] ಕೃಷ್ಣಾನದಿ ಕ್ಷೇತ್ರದ ಶೇಕಡ ೪೩.೭೪ ಭಾಗ ಕರ್ನಾಟಕದಲ್ಲಿದೆ. ಶೇಕಡ ೨೬.೮೧ ಭಾಗ ಮಹಾರಾಷ್ಟ್ರಕ್ಕೂ ಮತ್ತು ಶೇಕಡ ೨೯.೪೫ ಭಾಗ ಆಂಧ್ರಕ್ಕೂ ಸೇರಿದೆ. ಕೃಷ್ಣಾನದಿಯು ಮಹಾಬಲೇಶ್ವರ (ಮಹಾರಾಷ್ಟ್ರ) ಪ್ರದೇಶದಲ್ಲಿ ಹುಟ್ಟಿ

ಕರ್ನಾಟಕ, ಆಂಧ್ರಪ್ರದೇಶದ ಮೂಲಕ ಅಲ್ಲಲ್ಲಿ ಡೆಕ್ಕನ್‌ಟ್ರ್ಯಾಪ್, ಕೆಂಪು ಮರುಳು ಕಲ್ಲು ಹಸಿರು ಛಾಯೆಯ ಬಿಳಿಶೇದಿಕಲ್ಲು, ಗ್ರಾನೈಟ್, ಬೆಟ್ಟಗಳನ್ನು ಸುತ್ತಿಕೊಂಡು ಬಂಗಾಳ ಕೊಲ್ಲಿಯನ್ನು ಸೇರುತ್ತದೆ. ನದಿಯ ಮೇಲ್ದಂಡೆ ಪ್ರದೇಶವು ಕಪ್ಪು ಮಣ್ಣಿಂದ ಕೂಡಿದ್ದು ವ್ಯವಸಾಯಕ್ಕೆ ಅತ್ಯಂತ ಫಲವತ್ತಾಗಿದೆ. ವಾಯುಗುಣವು ಅತಿ ಪುರಾತನ ಕಾಲದಿಂದಲೂ ಸಾಮಾನ್ಯವಾಗಿ ಹಿತಕರವಾಗಿದ್ದಂತೆ ತೋರುತ್ತದೆ. ಹೀಗೆ ನೈಸರ್ಗಿಕ ಸೌಕರ್ಯಗಳಿಂದ ಕೂಡಿದ ನದಿ ಬಯಲು ಜನರನ್ನು ಶಿಲಾಯುಗದ ಆದಿ ಹಂತದಿಂದಲೇ ಆಕರ್ಷಿಸಿದ್ದುದು ಸಹಜವೇ. ಕರ್ನಾಟಕವು ಅಂತಿಮವಾಗಿ ೫೫ ಲಕ್ಷ ಹೆಕ್ಟೇರ್ ಭೂಮಿ ನೀರಾವರಿ ಸೌಲಭ್ಯ ಪಡೆಯಬೇಕಾಗಿದ್ದು. ಇದರಲ್ಲಿ ೨೨ ಲಕ್ಷ ಹೆಕ್ಟೇರ್ ಭೂಮಿಯೂ ಕೃಷ್ಣಾನದಿಯ ನೀರು ಬಳಕೆಯಾಗದೆ ಸಮುದ್ರಪಾಲಾಗುತ್ತದೆ.[೪]

ನದಿಯು ಶತಮಾನಗಳಿಂದ ಕರ್ನಾಟಕದ ಗುಲಬರ್ಗಾ, ವಿಜಾಪುರ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಹರಿಯುತ್ತಿದ್ದಾಗ್ಯೂ ಬಹಳ ವರ್ಷಗಳವರೆಗೆ ನದಿಯ ನೀರಿನ ಬಳಕೆಗೆ ಸೂಕ್ತ ಮಾರ್ಗದರ್ಶನದ ಕೊರತೆಯಿಂದಾಗಿ ಬಳಕೆಯಾಗದೆ ಇದ್ದದ್ದು ಇಲ್ಲಿನ ರೈತರ ದುರದೃಷ್ಟವೆನ್ನಬಹುದು. ಅಥವಾ ರಾಜಕೀಯ ಇಚ್ಛಾಶಕ್ತಿಯ ಕೊರತೆ ಎನ್ನಬಹುದು. ಈ ಅಂಶವೇ ನದಿ ವ್ಯಾಪ್ತಿಯ ಜಿಲ್ಲೆಗಳಾದ ಗುಲಬರ್ಗಾ, ರಾಯಚೂರು ಪ್ರದೇಶಗಳು ಆರ್ಥಿಕವಾಗಿ ಹಿಂದುಳಿದಿರುವದಕ್ಕೆ ಕಾರಣವಾಗಿದೆ.

ರಾಯಚೂರು ಜಿಲ್ಲೆಯ ದೇವದುರ್ಗ ಪ್ರದೇಶದ ರೈತರು ತಮ್ಮ ಜಮೀನುಗಳಿಗೆ ನೀರು ಬರುವುದನ್ನು ನಿರೀಕ್ಷಿಸಿ ಬೇಸತ್ತಂತೆ ಕಾಣುತ್ತಿದ್ದಾರೆ. ದೇವದುರ್ಗ ತಾಲ್ಲೂಕಿನ ವೀರಗೂಟ ಗ್ರಾಮದಿಂದ ಆರಂಭವಾಗಿ ಬಸವಂತಪುರ ಗ್ರಾಮದವರೆಗೆ ಕೃಷ್ಣಾನದಿಯು ಹರಿಯುತ್ತಿರುವುದನ್ನು ಕಾಣಬಹುದು. ಇದರಿಂದ ದೇವದುರ್ಗ ತಾಲ್ಲೂಕಿನ ವ್ಯಾಪ್ತಿಯಲ್ಲಿ ೬೯ ಕಿ.ಮೀ ಉದ್ದ ಹರಿಯುವುದನ್ನು ಕಾಣಬಹುದಾಗಿದೆ. ಕೃಷ್ಣಾನದಿ ಇಷ್ಟೆಲ್ಲ ಐತಿಹಾಸಿಕ ಮಹತ್ವದ ಸಂಸ್ಕೃತಿಯನ್ನು ಹೊಂದಿರುವ ಕೃಷ್ಣಾನದಿ ಪ್ರವಾಹದ ಸಂದರ್ಭದಲ್ಲಿ ತನ್ನ ವ್ಯಾಘ್ರ ರೂಪವನ್ನು ತೋರಿಸಿದೆ. ಇತ್ತೀಚಿಗೆ (೨೦೦೫, ಆಗಸ್ಟ್ – ೨೦೦೬, ಆಗಸ್ಟ್) ಕೃಷಿಯಲ್ಲಿ ಸಂಭವಿಸಿದ ಪ್ರವಾಹದಿಂದ ಆದ ಹಾನಿಯನ್ನು ಹಾಗೂ ಜನರ ಬಾಧೆಯನ್ನು ಕುರಿತು ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕನ್ನು ಅನುಲಕ್ಷಿಸಿ ಅಧ್ಯಯನ ಮಾಡುವುದು. ಪ್ರವಾಹದಲ್ಲಿ ಮುಳುಗಡೆಯಾದ ೩೬ ಗ್ರಾಮಗಳು ಅಧ್ಯಾಯನಿಸುವ ಮೂಲಕ ತಾಲ್ಲೂಕಿನ ರೈತರ ನೋವುಗಳ ಬಗ್ಗೆ ಪೂರೈಸುವುದೆ ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಪ್ರಮುಖವಾಗಿ ಸರ್ಕಾರದ ಕಡತಗಳು, ಸಂದರ್ಶನ ಆಧಾರಿತ ಮಾಹಿತಿಗಳು ಹಾಗೂ ದಿನಪತ್ರಿಕೆಗಳು,

ನಿಯತಕಾಲಿಕೆಗಳನ್ನು ಆಧಾರವನ್ನಾಗಿ ಸಂಶೋಧನಾ ಮಾಹಿತಿಯ ವಸ್ತುಗಳಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

**೧.೧ ಅಧ್ಯಯನದ ಉದ್ದೇಶ, ಮಹತ್ವ :**

ಕರ್ನಾಟಕ ಸಮಾನತೆ ಕುರಿತಂತೆ ನೀಡಿರುವ ಡಾ. ಡಿ.ಎಂ. ನಂಜುಂಡಪ್ಪನವರ ವರದಿ ಅನುಸಾರ ದೇವದುರ್ಗ ತಾಲ್ಲೂಕು ದೇಶದಲ್ಲಿಯೇ ಅಲ್ಲದೆ ದಕ್ಷಿಣ ಏಷಿಯಾದಲ್ಲೇ ಅತಿ ಹಿಂದುಳಿದ ತಾಲ್ಲೂಕು ಎಂಬುದಾಗಿ ತಿಳಿಸಲಾಗಿದೆ. ಇದಕ್ಕೆ ಸರಕಾರ ಪ್ರಕಟಿಸಿರುವ ವರದಿಯ ಅಂಕಿ-ಅಂಶಗಳೇ ಸಾಕ್ಷಿ. ಶಿಕ್ಷಣ, ಆರೋಗ್ಯ, ಲೋಕೋಪಯೋಗಿ, ಆಡಳಿತ, ಕೃಷಿ, ತಂತ್ರಜ್ಞಾನ ಸಂಬಂಧಿಸಿದಂತೆ ತಾಲ್ಲೂಕು ಅತಿ ಹಿಂದುಳಿದಿದೆ. ಇತರ ಕ್ಷೇತ್ರಗಳಲ್ಲಿ ಇದಕ್ಕಿಂತ ಭಿನ್ನವಾಗಿಲ್ಲ.

ನೀರು ಸಕಲ ಸೃಷ್ಟಿಯ ಜೀವಸೆಲೆ. ಅದರಲ್ಲೂ ಮನುಕುಲದ ಚೈತನ್ಯವೇ ನೀರು. ಅಂತಹ ನೀರು ಅವರ ಅಸ್ತಿತ್ವಕ್ಕೇ ಮುಳುವಾದರೆ, ಅಂತಹ ದೃಶ್ಯವನ್ನು ಕಲ್ಪಿಸಿಕೊಳ್ಳುವುದೇ ದುಸ್ತರ. ಮೊದಲೇ ಬರಗಾಲ ಅನಾವೃಷ್ಟಿಯಿಂದ, ರಾಜಕೀಯ ಇಚ್ಛಾಶಕ್ತಿಯ ಕೊರತೆಯಿಂದ, ದುಸ್ತರ ಬದುಕಿನಲ್ಲಿರುವ ಜನತೆ ನಿರಾಸಕ್ತಿಯಿಂದ ಮುಗಿಲು ನೋಡಬೇಕಾದಂತಹ ಪರಿಸ್ಥಿತಿಯಲ್ಲಿ ಸೃಷ್ಟಿಯ ವೈಚಿತ್ರ್ಯವೋ ಅಥವಾ ಅನ್ಯರಾಜ್ಯಗಳು ತಮ್ಮ ಅಣೆಕಟ್ಟುಗಳನ್ನು ತಮ್ಮವರ ಹಿತಾಸಕ್ತಿಯನ್ನು ರಕ್ಷಿಸುವ ಭರದಲ್ಲಿ ಯಾವ ಮುನ್ಸೂಚನೆಯೂ ಇಲ್ಲದೇ ಅಣೆಕಟ್ಟಿನಲ್ಲಿ ಶೇಖರಿಸಿದ ನೀರನ್ನೆಲ್ಲಾ ಹೊರಗೆ ಬಿಟ್ಟಾಗ ಸಂಭವಿಸುವ ಹಾನಿ ಹೇಳತೀರದು. ಮಳೆಯಿಲ್ಲದೇ ಹನಿ ನೀರು ಕಾಣದ ಜೀವಗಳಿಗೆ ಪ್ರವಾಹರೂಪದಲ್ಲಿ ಬಂದೆರಗಿದ ವಿಪತ್ತನ್ನು ಮೃತ್ಯುಕೂಪದಂತೆ ಕಂಡರೆ ಆಶ್ಚರ್ಯವಾಗಬೇಕಿಲ್ಲ.

ನೈಸರ್ಗಿಕ ವಿಕೋಪಕ್ಕೆ ತುತ್ತಾಗಿರುವ ದೇವದುರ್ಗ ತಾಲ್ಲೂಕಿನಲ್ಲಿ ಜನತೆ ಸದಾ ಬರಗಾಲ ಮತ್ತು ಪ್ರವಾಹ ವಿಕೋಪದ ಬವಣೆ ತಾಳದೆ ಅನಿವಾರ್ಯವಾಗಿ ಹೊಟ್ಟೆ ಪಾಡಿಗೆ ಸಾಕಷ್ಟು ಕುಟುಂಬಗಳು ದೂರದ ವಾಣಿಜ್ಯ ಪಟ್ಟಣಗಳಾದ ಬೆಂಗಳೂರು, ಮುಂಬೈ, ಮಂಗಳೂರು ಮುಂತಾದ ಪ್ರದೇಶಗಳಿಗೆ ವಲಸೆ ಹೋಗುತ್ತಿದ್ದಾರೆ. ತಾಲ್ಲೂಕಿನಲ್ಲಿ ಪ್ರವಾಹದಿಂದ ಮುಳುಗಡೆಯಾದ ೩೬ ಗ್ರಾಮಗಳ ವಾಸ್ತವಿಕತೆಯನ್ನು ತಿಳಿಯುವುದು ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ. ರೈತರ ಬವಣೆ ಪ್ರವಾಹದ ಪರಿಹಾರ, ಒಬ್ಬ ರೈತಗೆ ಎಷ್ಟು ಪ್ರಮಾಣದ ಮೊತ್ತ ದೊರಕಿವೆ ಎಂಬು ಅಂಶಗಳನ್ನು ತಿಳಿದರೆ ಶೋಚನೀಯವಾಗುತ್ತದೆ. ಅಧ್ಯಯನವು ಪ್ರವಾಹ ಮುಳುಗಡೆಯಾದ ಗ್ರಾಮಗಳ ಸಮಾಜೋ–ಆರ್ಥಿಕ ದೃಷ್ಟಿಯಿಂದ ಅಧ್ಯಯನ ಮಾಡುವ ಮೂಲಕ ತಾಲ್ಲೂಕಿನ ರೈತರ ದುಃಸ್ಥಿತಿಯ ಬಗ್ಗೆ ಮಾಹಿತಿ ಪೂರೈಸುವ ಉದ್ದೇಶ ಇದಾಗಿದೆ.

## ೧.೨ ಅಧ್ಯಯನದ ವ್ಯಾಪ್ತಿ :

ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಕೃಷ್ಣಾನದಿಯು ದೇವದುರ್ಗ ತಾಲ್ಲೂಕಿನಲ್ಲಿ ವೀರಗೂಟ ಗ್ರಾಮದಿಂದ ಬಸವಂತಪುರ ಗ್ರಾಮದವರೆಗೆ ಹರಿಯುತ್ತಿರುವುದನ್ನು ಕಾಣಬಹುದು. ಇದು ತಾಲ್ಲೂಕಿನ ಸುಮಾರು ೬೯ ಕಿ.ಮೀ ಉದ್ದ ಹರಿಯುತ್ತಿದೆ. ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಅಪ್ರಾಳ, ಮದರಕಲ್, ಹೀರೆರಾಯಕುಂಪಿ, ಗಾಗಲ್, ಗೂಗಲ್, ಇಟಗಿ, ಬಸವಂತಪುರ, ಅಂಚೆಸೂಗುರು, ಕರಿಕಳ್ಳಿ, ಕೊಪ್ಪರ, ಪರತಪುರ, ಲಿಂಗದಹಳ್ಳಿ, ಚಪ್ಪಾಳಿಕಿ, ಹೇರೂರು, ಹೂವಿನಹೆಡಿಗಿ, ಜೋಳದದಡಗಿ, ಯಾಟಗಲ್, ದೊಂಡಂಬಳ್ಳಿ, ಕುರ್ಕಿಹಳ್ಳಿ, ಹೇರುಂಡಿ, ವಗಡಂಬಳಿ, ಗೋಪಾಳಪುರ, ನಿಲವಂಜಿ, ಮುದುಗೋಡ, ಬುದ್ದಿನ್ನಿ, ಬುಂಕಲ್‌ದೊಡ್ಡಿ, ಚಿಂಚೋಡಿ, ಅಂಜಳ, ಮೆದರಗೋಳ, ಬೆಣಕಲ್, ವೀರಗೋಟ, ಬಾಗೂರು, ಯರಗುಡ್ಡ, ಮೈದಿನಪುರ, ಚಿಕ್ಕರಾಯಕುಂಪಿ, ಈ ೩೬ ಗ್ರಾಮ ಕೃಷ್ಣಾನದಿ ದಡದಲ್ಲಿ ಬರುತ್ತಿದ್ದು. ಪ್ರವಾಹ ಸಂದರ್ಭದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ-ಆರ್ಥಿಕ ಸ್ಥಿತಿ–ಗತಿ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ೧.೩ ದೇವದುರ್ಗ ತಾಲೂಕಿನ ಐತಿಹಾಸಿಕ ಹಿನ್ನೆಲೆ :

ಕರ್ನಾಟಕ ಚರಿತ್ರೆಯಲ್ಲಿ ರಾಯಚೂರು ಜಿಲ್ಲೆಯು ವಹಿಸಿದ ಪಾತ್ರವು ಚಿರಸ್ಮರಣೀಯವಾಗಿದೆ. ಜಿಲ್ಲೆಯ ಐತಿಹಾಸಿಕ ಹಿನ್ನೆಲೆಯು ಕ್ರಿ.ಪೂ. ೨೦೦೦ ವರ್ಷಗಳಷ್ಟು ಪ್ರಾಚೀನವಾಗಿದ್ದು, ಹಳೆಯ ಶಿಲಾಯುಗ ಸಂಸ್ಕೃತಿಯಿಂದ ಪ್ರಾರಂಭವಾಗಿ ಕರ್ನಾಟಕದ ಎಲ್ಲಾ ಅರಸು ಮನೆತನಗಳಿಗೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ. ಹೈದರಾಬಾದ ನಿಜಾಮರ ಸರಕಾರದ ವಿರುದ್ಧ ನಡೆದ ಸ್ವಾತಂತ್ರ ಸಂಗ್ರಾಮದಲ್ಲಿ ರಾಯಚೂರು ಮುಖ್ಯಪಾತ್ರ ವಹಿಸಿತ್ತು. ಜಿಲ್ಲೆಯ ಅನೇಕ ಭಾಗಗಳಲ್ಲಿ ದೊರೆತ ಶಿಲಾಶಾಸನಗಳು. ಅಳಿದುಳಿದು ನಿಂತಿರುವ ಕೋಟೆ ಕೊತ್ತಲಗಳು ಹಾಗೂ ದೇವಸ್ಥಾನಗಳು ಜಿಲ್ಲೆಯ ಇತಿಹಾಸವನ್ನು ವಿವರಿಸುತ್ತವೆ.[೫]

ಕರ್ನಾಟಕದ ಸಂಸ್ಕೃತಿಯ ವೈಭವ, ವೈಶಿಷ್ಟ್ಯಗಳನ್ನು ತಿಳಿಸುವ ಪ್ರದೇಶಗಳಲ್ಲಿ ದೇವದುರ್ಗವೂ ಒಂದಾಗಿದೆ. ಇಲ್ಲಿ ಅನೇಕ ರಾಜ ಮನೆತನಗಳು ಆಳ್ವಿಕೆ ಮಾಡಿ ಶಾಸನಗಳನ್ನು ಕೋಟೆ, ಕೊತ್ತಲ, ವೀರಗಲ್ಲು, ಮಾಸ್ತಿಕಲ್ಲು ಇತರೆ ಸ್ಮಾರಕಗಳನ್ನು ರಚಿಸಿ ಸಾಂಸ್ಕೃತಿಕವಾಗಿ ಬೆಳೆಯುವುದಕ್ಕೆ ಕಾರಣೀಭೂತರಾಗಿದ್ದಾರೆ.[೬]

ಪ್ರತಿಯೊಂದು ಪ್ರದೇಶವು ಭೌಗೋಳಿಕತೆಯಲ್ಲಿ ಏಕತೆ ಹೊದಿರುತ್ತವೆ. ಇಂತಹ ಏಕತೆ ನಾಗರಿಕತೆಯ ಬೆಳವಣಿಗೆಯಲ್ಲಿ ಹಾಸು ಹೊಕ್ಕಾಗಿರುವುದು ರಾಯಚೂರು ಜಿಲ್ಲೆಯ ೫೫

ತಾಲ್ಲೂಕುಗಳಲ್ಲೊಂದಾದ ದೇವದುರ್ಗ ತಾಲ್ಲೂಕಿನ ವಿಸ್ತೀರ್ಣ ೧೫೨೭ ಚದುರ ಮೈಲು. ಇದರ ಜನಸಂಖ್ಯೆ ೨,೨೨,೪೫೭.[೭] ಅಧ್ಯಯನ ವಿಷಯಕ್ಕೆ ಒಳಪಟ್ಟ ತಾಲ್ಲೂಕಿನ ಉತ್ತರ ಭಾಗದಲ್ಲಿ ಕೃಷ್ಣಾನದಿ ಹರಿಯುತ್ತದೆ. ಇದರ ದಡದಲ್ಲಿ ಅನೇಕ ಪುಣ್ಯ ಕ್ಷೇತ್ರಗಳು ಮತ್ತು ಋಷಿಗಳು ತಪಸ್ಸು ಮಾಡಿದ ಕುರುಹುಗಳು ಕಂಡುಬರುತ್ತವೆ. ಇಂಥ ಶ್ರೇಷ್ಠ ಸ್ಥಾನಗಳಲ್ಲಿ ಅಣೆ ಮಲ್ಲೇಶ್ವರ ಕ್ಷೇತ್ರವು ಒಂದಾಗಿದೆ. ಅಲ್ಲದೆ ಇಲ್ಲಿ ಜಮದಗ್ನಿ ಮಹಾಋಷಿ ತಪಸ್ಸು ಮಾಡಿದ ಒಂದು ಗುಹೆಯೂ ಇದೆ. ಅಲ್ಲಿ ಕೃಷ್ಣಾ ನದಿಯೂ ಉತ್ತರಾಭಿಮುಖವಾಗಿ ಹರಿಯುತ್ತಿರುವುದರಿಂದ ಇದು ದಕ್ಷಿಣಕಾಶಿ ಎಂದು ಪ್ರಸಿದ್ದಿ ಪಡೆದಿದೆ. ನದಿಗುಂಟ ಮುಂದೆ ೩ ಮೈಲು ದೂರದ ಕೂಪ್ಪರ ಗ್ರಾಮದಲ್ಲಿ ನರಸಿಂಹ ದೇವಸ್ಥಾನವಿದ್ದು, ರಾಜ್ಯದ ನಾನಾಭಾಗಗಳಿಂದ ನರಸಿಂಹ ಜಯಂತಿಗೆ ಹಾಗೂ ಕರ್ನಾಟಕದ ಸಂತರಲ್ಲೊಬ್ಬರಾದ ಪುರಂದರದಾಸರ ಪುಣ್ಯತಿಥಿಗೆ ಈಗಲೂ ಬರುತ್ತಿರುವುದನ್ನು ಕಾಣಬಹುದಾಗಿದೆ.

ಇಲ್ಲಿಂದ ಪೂರ್ವಕ್ಕೆ ೫ ಮೈಲು ದೂರದಲ್ಲಿ ೧೨ನೇ ಶತಮಾನದ ಶಿವಶರಣ ಅಲ್ಲಮಪ್ರಭುದೇವರ ದೇವಾಲಯವಿದ್ದು, ಅವರು ಇಲ್ಲಿ ನೆಲೆಸಿ ತಪಸ್ಸನ್ನಾಚರಿಸಿದ ಗುಹೆ ಸಾಕ್ಷಿಭೂತವಾಗಿದೆ. ಮತ್ತು ಚೈತ್ರ ಶು॥ ಪಂಚಮಿಗೆ ಪ್ರತಿವರ್ಷ ಈ ಕ್ಷೇತ್ರದಲ್ಲಿ ಉತ್ಸವ, ತೇರು, ಜಾತ್ರೆಗಳಿದ್ದು, ವಿಜೃಂಭಣೆಯಿಂದ ಹೀಗಲೂ ನಡೆಯುತ್ತಿರುವುದು ಒಂದು ವಿಶೇಷ. ಈ ಮೂರು ಸ್ಥಳಗಳನ್ನು ಒಂದೇ ದಿನದಲ್ಲಿ ಸಂದರ್ಶಿಸಿದವರಿಗೆ ಕಾಶಿಗೆ ಹೋದಷ್ಟು ಪುಣ್ಯ ಸಂಪಾದಿಸುತ್ತಾರೆಂಬುದು ಜನರ ನಂಬಿಕೆ.

ತಾಲ್ಲೂಕಿನ ಮುಖ್ಯ ಕೇಂದ್ರವಾದ ದೇವದುರ್ಗ ಪಟ್ಟಣವು ಪರ್ವತ ಶ್ರೇಣಿಗಳ ಮಧ್ಯೆ ಇದೆ. ದೇವರು ಸೃಷ್ಟಿಸಿದ ಕೋಟೆಯ ಮಧ್ಯ ಪಟ್ಟಣ ಇರುವುದರಿಂದ ಇದಕ್ಕೆ ದೇವದುರ್ಗವೆಂದು ಹೆಸರು ಬಂದಿದೆ ಎಂದು ಸ್ಥಳೀಯರು ನಂಬಿಕೊಂಡಿದ್ದಾರೆ. ಇತಿಹಾಸದಲ್ಲಿ ದೇವದುರ್ಗ ತಾಲ್ಲೂಕು ಸುರಪುರದ ಸಂಸ್ಥಾನದ ಆಡಳಿತಕ್ಕೆ ಒಳಪಟ್ಟಿತ್ತು, ಇಲ್ಲಿ ಒಬ್ಬ ಪಾಳೇಗಾರನಿರುತ್ತಿದ್ದ. ಇಲ್ಲಿನ ಕೊನೆಯ ಪಾಳೇಗಾರನಾದ ರಾಜ ಕಿಂಚನಾಯಕನ ತರುವಾಯ ದತ್ತು ತೆಗೆದುಕೊಂಡು. ಈ ಪಾಳ್ಯಗಾರ ಮನೆತನ ಮುಂದುವರಿಯಿತು.[೮] ಈಗಲೂ ಈ ಮನೆತನಕ್ಕೆ ಸಂಬಂಧಪಟ್ಟ ರಾಜಾ ವಾಸುದೇವನಾಯಕನ ಮಕ್ಕಳಲ್ಲಿ ಕೊನೆಯವರಾದ ಆರ್.ವಿ.ನಾಯಕ್ ಜೀವಂತವಾಗಿದ್ದಾರೆ. ಹಿಂದಿನ ಕಾಲದ ಗತ ವೈಭವದ ಕೇಶವನಾಯಕ ದೊರೆ ಕಟ್ಟಿಸಿದ ದೊಡ್ಡ ಅರಮನೆಯೂ ಪಟ್ಟಣದ ಮಧ್ಯ ಇದೆ. ಶತಮಾನಗಳ ಇತಿಹಾಸವನ್ನು ಹೊಂದಿದ ಇದು ಇಂದು ಸಂಪೂರ್ಣವಾಗಿ ಶಿಥಿಲಗೊಂಡಿದ್ದು, ಅರಮನೆಯ ಒಳಗಿನ ಭಾಗವೆಲ್ಲಾ ಬಿದ್ದು ಹೋಗಿದೆ. ಪಾಳೇಗಾರರು ನಾಯಕ ವಾಲ್ಮೀಕಿ ಜನಾಂಗಕ್ಕೆ ಸೇರಿದವರಾಗಿದ್ದಾರೆ. ಈ ಜನರು ದೃಢ ಯೋಧರೆಂಬುದಕ್ಕೆ ಸಾಕ್ಷಿಯಾಗಿದ್ದರು. ಸುರಪುರ

ಸಂಸ್ಥಾನದ ಮೇಲೆ ದಾಳಿ ನಡೆಸಿದ ಔರಂಗಜೇಬ್ ಈ ಸಂದರ್ಭದಲ್ಲಿ ನೀಡಿರುವ ಪತ್ರ ಇಂದಿಗೂ ಸುರಪುರ ಸಂಸ್ಥಾನದ ಅರಮನೆಯಲ್ಲಿ ಸುರಕ್ಷಿತವಾಗಿದೆ.[೯] ಆರ್.ಪಿ.ನಾಯಕ್ ಅವರು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಈ ವಿಷಯವನ್ನು ಸ್ಪಷ್ಟಪಡಿಸಿದರು. ಈ ಪ್ರದೇಶವು ಇಂಥ ಸಾಹಸಿ ವೀರರ ಸ್ವಾತಂತ್ರ ಸಂಗ್ರಾಮದ ನೆಲೆಯಾಗಿದೆ. ಸ್ವಾತಂತ್ರ ಸಂಗ್ರಾಮದ ಕಿಡಿ ೧೮೫೭ರಲ್ಲಿ ನಡೆದಾಗ ರಾಜಾ ವೆಂಕಟಪ್ಪನಾಯಕ ಸುರಪುರ ದೊರೆಯಾಗಿದ್ದನು.

ತಾಲ್ಲೂಕು ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಹಿಂದೆ ಉಳಿದಿದ್ದರೂ, ಸಾಹಿತ್ಯಿಕವಾಗಿ ಮತ್ತು ಧಾರ್ಮಿಕವಾಗಿ ತನ್ನದೇ ಸ್ಥಾನವನ್ನು ಪಡೆದಿದೆ. ದೇವದುರ್ಗ ಶರಣರ, ದಾಸರ ನೆಲೆವೀಡು. ಜಾಲಹಳ್ಳಿಯ ವೀರಭದ್ರ ಕವಿ, ಗಣೇಕಲ್ಲಿನ ಸಂಗಪಿಟು, ದೇವದುರ್ಗ ಚನ್ನಮಲ್ಲ ಕವಿ, ಅಮಾತೆಪ್ಪನವರು ಕನ್ನಡ ಸಾಹಿತ್ಯ ಲೋಕದಲ್ಲಿ ತಮ್ಮದೇ ಆದ ಛಾಪು ಮೂಡಿಸಿದ್ದಾರೆ. ಮಸರಕಲ್ಲು ಶಿವಶರಣೆ ಮುಕ್ತಯಕ್ಕನ ಕರ್ಮಭೂಮಿ, ಕೃಷ್ಣಾ ದಡದ ಗೂಗಲ್ ಪ್ರಭುದೇವರ ತಪೋಭೂಮಿ, ಗೂಗಲ್ ಪರಪಯ್ಯ, ಗಬ್ಬೂರ ಹಂಪಣ್ಣನಂತಹ ಅನುಭವಿಗಳು, ಇಲ್ಲಿ ನೆಲೆಸಿದ್ದರು. ಕೂಡಲೂರು ಬಸವಲಿಂಗ ಶರಣರ ಸಮಾಧಿ ಖಾನಾಪುರದಲ್ಲಿ ಇದೆ.

ಹಿಂದೂ, ಮುಸ್ಲಿಂ ಸಾಮರಸ್ಯಕ್ಕಾಗಿ ತಮ್ಮ ಬದುಕನ್ನೇ ತ್ಯಾಗ ಮಾಡಿದ ಬಡೇಸಾಬರು ದೇವದುರ್ಗ ತಾಲ್ಲೂಕಿನ ಜೋಳದಡಗಿ ಗ್ರಾಮದವರು. ಇವರು ಉರ್ದು ಮತ್ತು ಕನ್ನಡ ಭಾಷೆಯಲ್ಲಿ ಪಾಂಡಿತ್ಯ ಪಡೆದಿದ್ದರು. ಅವರು ರಚಿಸಿದ ಕೀರ್ತನೆಗಳು, ಮಾಡಿದ ಉಪದೇಶಗಳು, ಆದರ್ಶಪ್ರಿಯವಾಗಿವೆ.[೧೦]

ಬೌದ್ಧ ಗುಪ್ತರ ಕಾಲದ ಇತಿಹಾಸವು ಗಬ್ಬೂರಿಗೂ ಅನ್ವಯಿಸುತ್ತದೆ. ಗಬ್ಬೂರಿನ ಪೂರ್ವದ ಹೆಸರು ಗೋಪುರ ಗ್ರಾಮ ಎಂದು. ಗೋಪುರಗಳಿಂದ ಕೂಡಿದ ಗೋಪುರ ಗ್ರಾಮ, ಕಾಲದ ನಂತರದಲ್ಲಿ ಗಬ್ಬೂರು ಎಂಬ ಹೆಸರಿನಿಂದ ಕರೆಸಿಕೊಳ್ಳುತ್ತಿದೆ. ಗಬ್ಬೂರನ್ನು ಹಿಂದೆ ಮಣಿಪುರವೆಂತಲೂ ಕರೆಯಲಾಗುತ್ತಿತ್ತು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇದು ಸ್ಮಾರಕಗಳಿಂದ ಹೆಚ್ಚು ಪ್ರಚಾರ ಪಡೆದಿತ್ತು. ೧೨ ಮತ್ತು ೧೩ನೇ ಶತಮಾನದಲ್ಲಿ ಅಗ್ರಹಾರಗಳು ಮತ್ತು ಶೈಕ್ಷಣಿಕ ಕೇಂದ್ರಗಳ ಪ್ರಸಿದ್ಧ ಸ್ಥಳವಾಗಿತ್ತು. ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದ ಗಬ್ಬೂರು ಧಾರ್ಮಿಕವಾಗಿ ಅಷ್ಟೇ ಪ್ರಸಿದ್ಧಿ ಹೊಂದಿದೆ. ಏಷ್ಯಾಖಂಡದಲ್ಲಿಯೇ ಅತ್ಯಂತ ಬಡತನದ, ಹಿಂದುಳಿದಿರುವ ಗ್ರಾಮವೆಂದು ಸಹ ಅಪಕೀರ್ತಿ ಪಡೆದಿದೆ.

**ಅಡಿಟಿಪ್ಪಣಿಗಳು :**

೧. ಡಾ. ಎನ್.ಚಿನ್ನಸ್ವಾಮಿ ಸೋಸಲೆ, **ನಾಲ್ವಡಿ ಕೃಷ್ಣನ ಮೈಸೂರು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೫ ಪುಟ-೧೪

೨. (ಸಂ) ಸೂರ್ಯನಾಥ ಯು ಕಾಮತ, **ಕರ್ನಾಟಕ ರಾಜ್ಯ ಗ್ಯಾಸಟಿಯರ್, ಭಾಗ ೧,** ಕರ್ನಾಟಕ ರಾಜ್ಯ ಸರ್ಕಾರ. ೧೯೮೪. ಪುಟ-೩೦

೩. ಡಾ. ವಿರೂಪಾಕ್ಷಿ ಪೂಜಾರಹಳ್ಳಿ, **ಜಲಸಂಬಂಧಿ ಚಳುವಳಿಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೯. ಪುಟ ೨೧-೨೪

೪. ಡಾ. ಟಿ.ಗೋಪಿಂದಯ್ಯ, **ರಾಜಕೀಯ ಸುಳಿಯಲ್ಲಿ ಆಲಮಟ್ಟಿ ಆಣೆಕಟ್ಟು, ಭಾಗ ೧,** ಸಮಾಜ ವಿಜ್ಞಾನ ಸಂಶೋಧನಾ ಸಂಸ್ಥೆ, ಬೆಂಗಳೂರು, ೧೯೯೭. ಪುಟ-೧೨೧

೫. ಎಚ್.ಎಸ್.ಪಾಟೀಲ, ಅಲ್ಲಮಪ್ರಭು ಬೆಟ್ಟದೂರು, **ತಿರುಳ್ಗನ್ನಡ,** ಅಖಿಲ ಭಾರತ ೬೨ನೇ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ, ಕೊಪ್ಪಳ, ೧೯೯೩, ಪುಟ. ೮, ೬೩, ೬೪

೬. ಡಾ. ಹೆಚ್.ಚಂದ್ರಶೇಖರ್, **ಸಿರಿದುರ್ಗ,** ಪ್ರಕಾಶಕರು, ದೇವದುರ್ಗ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ೨೦೦೩. ಪುಟ ೨೪, ೨೭, ೨೮, ೩೪

೭. ರಾಯಚೂರು ಜಿಲ್ಲಾ ಜನಗಣತಿ ವರದಿ ೨೦೦೧

೮. **ದೇವದುರ್ಗ ದರ್ಶನ,** ತಾಲ್ಲೂಕಾ ಅಭಿವೃದ್ಧಿ ಮಂಡಳಿ, ದೇವದುರ್ಗ, ೧೯೭೨, ಪುಟ ೧, ೨

೯. ಸೂರ್ಯಕಾಂತ ಗುಣಕಿಮಠ, **ದೇವದುರ್ಗದ ದೊರೆಗಳು,** ಸುವರ್ಣಸಿರಿ ರಾಯಚೂರು ಜಿಲ್ಲಾ ಐದನೇಯ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ, ರಾಯಚೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು, ೧೯೯೯, ಪುಟ ೮೬, ೮೮

೧೦. ಶಾಶ್ವತೆಸ್ವಾಮಿ ಮುಕ್ಕಂದಿಮಠ, **ಹೊನ್ನಸಿರಿ,** ನೆನೆಪಿನ ಸಂಚಿಕೆ. ರಾಯಚೂರು ಜಿಲ್ಲಾ ೩ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ ಸಿಂಧನೂರು, ೧೯೯೪. ಪುಟ ೧೦೨, ೧೦೬, ೧೦೮

# ಅಧ್ಯಾಯ ಎರಡು

## ಗ್ರಾಮಗಳ ಸದ್ಯದ ಸ್ಥಿತಿಗತಿ : ಕೃಷಿ ಹಾಗೂ ಕೈಗಾರಿಕೆಗಳನ್ನು ಅನುಲಕ್ಷಿಸಿ

೨.೧ ಗ್ರಾಮಗಳ ಸದ್ಯದ ಸ್ಥಿತಿಗತಿ

೨.೨ ಕೃಷಿ

೨.೩ ಕೈಗಾರಿಕೆ

# ಅಧ್ಯಾಯ ಎರಡು

## ಗ್ರಾಮಗಳ ಸದ್ಯದ ಸ್ಥಿತಿಗತಿ : ಕೃಷಿ ಹಾಗೂ ಕೈಗಾರಿಕೆಗಳನ್ನು ಅನುಲಕ್ಷಿಸಿ

ಭಾರತೀಯರಿಗೆ ಗ್ರಾಮ ಎಂಬುದು ಕೇವಲ ಒಂದು ಭೌಗೋಳಿಕ ಚೌಕಟ್ಟಾಗಿ ಗೋಚರಿಸದೇ, ಅದಕ್ಕೂ ಮಿಗಿಲಾದ ಜೈವಿಕ, ಸಾಮಾಜಿಕ, ಸಾಂಸ್ಕೃತಿಕ, ಸೈದ್ಧಾಂತಿಕ ವ್ಯಕ್ತಿ, ವಸ್ತು ವಿಶೇಷಗಳ ಆಗರವಾಗಿ ಕಾಣಿಸುತ್ತದೆಂದರೆ ಸೋಜಿಗವೆನಿಸದು. ಇದಕ್ಕೆ ಪ್ರಮುಖ ಕಾರಣ ಗ್ರಾಮಸ್ಥರು ತನ್ನ ಗ್ರಾಮದೊಡನೆ ಅನಾದಿ ಕಾಲದಿಂದಲೂ ಬೆಳೆಸಿಕೊಂಡು ಬಂದಿರುವ ಕೃಷಿ ಹಾಗೂ ಗುಡಿಕೈಗಾರಿಕೆಗಳ ಭಾವನಾತ್ಮಕ ಸಂಬಂಧ. ಗ್ರಾಮಗಳು ವಾಸ್ತವಿಕ ಸ್ಥಿತಿಗತಿಯನ್ನು ಪ್ರತಿಬಿಂಬಿಸುತ್ತದೆಂಬುವುದು ಈ ಅಧ್ಯಯನದ ವಿಷಯ ವಸ್ತುವಾಗಿದೆ. ಈ ದಿಶೆಯಲ್ಲಿ ದೇವದುರ್ಗ ತಾಲ್ಲೂಕಿನಲ್ಲಿ ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ ಆರ್ಥಿಕತೆಯ ಸಮಗ್ರ ಅಧ್ಯಯನ ಕೈಗೊಳ್ಳುವ ಅವಶ್ಯಕತೆ ಇದೆ. ಗ್ರಾಮಗಳ ಬಗ್ಗೆ ಈಗ ಏನಾಗುತ್ತಿದೆ ಎಂಬುದಕ್ಕಿಂತ ಏನಾಗಿದೆ, ಯಾವ ಸ್ಥಿತಿಯಲ್ಲಿದೆ ಎಂಬುದನ್ನು ಪರಿಶೀಲಿಸುವುದು ಅವಶ್ಯಕವೆನಿಸುತ್ತದೆ.[೧]

### ೨.೧ ಗ್ರಾಮಗಳ ಸದ್ಯದ ಸ್ಥಿತಿಗತಿ

ಕರ್ನಾಟಕದ ಉತ್ತರ ಭಾಗದಲ್ಲಿ ಬರುವ ರಾಯಚೂರು ಜಿಲ್ಲೆ ಇತಿಹಾಸ ಪ್ರಸಿದ್ಧವಾಗಿದೆ. ತುಂಗಭದ್ರಾ ಮತ್ತು ಕೃಷ್ಣಾನದಿಗಳ ನಡುವೆ ಇರುವ ಜಿಲ್ಲೆ ಪ್ರಾಚೀನ ಕಾಲದಿಂದಲೂ ಮಾನವನ ನೆಲೆಯಾಗಿದೆ. ಪುರಾಣ ಪ್ರಸಿದ್ಧವೂ ಆಗಿರುವ ಇದು ಹಿಂದೆ ೯ ತಾಲ್ಲೂಕುಗಳನ್ನೊಳಗೊಂಡಿತ್ತು. ಪ್ರಸ್ತುತ ೧೯೯೭ನೇ ಇಸ್ವಿಯಲ್ಲಿ ಹೊಸ ಜಿಲ್ಲೆಗಳ ಪುನರ್ ವಿಂಗಡಣೆ ಮಾಡಲಾಗಿದ್ದರ ಪ್ರಯುಕ್ತ ತನ್ನ ಪ್ರಮುಖ ತಾಲ್ಲೂಕು ಕೇಂದ್ರವಾಗಿದ್ದ ಕೊಪ್ಪಳವನ್ನು ಜಿಲ್ಲಾ ಕೇಂದ್ರವನ್ನಾಗಿ ವಿಭಾಗಿಸಿ, ರಾಯಚೂರು ಜಿಲ್ಲೆಯಾಗಿ ವಿಭಾಗಿಸಲಾಯಿತು. ಇಂದು ಈ ಜಿಲ್ಲೆಯು ೫ ತಾಲ್ಲೂಕುಗಳನ್ನು ಹೊಂದಿದೆ. ಈ ತಾಲ್ಲೂಕುಗಳಲ್ಲಿ ದೇವದುರ್ಗ ಒಂದಾಗಿದೆ. ದೇವದುರ್ಗ ರಾಯಚೂರಿನ

ಪಶ್ಚಿಮಕ್ಕಿದ್ದು, ತಾಲ್ಲೂಕಿನ ಉತ್ತರದಲ್ಲಿ ಕೃಷ್ಣಾನದಿ ಹರಿಯುತ್ತದೆ. ಇದೇ ತಾಲ್ಲೂಕಿನ ಸೀಮಾರೇಖೆಯೂ ಹೌದು.

ದೇವದುರ್ಗ ತಾಲ್ಲೂಕನ್ನು ಆಡಳಿತಾತ್ಮಕ ದೃಷ್ಟಿಯಿಂದ ನಾಲ್ಕು ಹೋಬಳಿಗಳನ್ನಾಗಿ ವಿಂಗಡಿಸಲಾಗಿದೆ. ಹೋಬಳಿಯಲ್ಲಿ ಬರುವ ಗ್ರಾಮಗಳು ಹಾಗೂ ಕೃಷ್ಣಾನದಿಯಲ್ಲಿ ಮುಳುಗಡೆಯಾದ ಗ್ರಾಮಗಳ ಸಂಕ್ಷಿಪ್ತ ವಿವರ.[೨]

| | ಹೋಬಳಿಗಳ ಹೆಸರು | ಹೋಬಳಿಗಳ ವ್ಯಾಪ್ತಿಗಳಲ್ಲಿ ಬರುವ ಗ್ರಾಮಗಳ ಸಂಖ್ಯೆ | ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಂಖ್ಯೆ |
|---|---|---|---|
| ೧ | ದೇವದುರ್ಗ | ೪೮ | ೧೭ |
| ೨ | ಜಾಲಹಳ್ಳಿ | ೪೭ | ೧೧ |
| ೩ | ಅರಕೇರಾ | ೪೨ | ೦ |
| ೪ | ಗಬ್ಬೂರು | ೩೬ | ೮ |
| **ಒಟ್ಟು** | | **೧೭೩** | **೩೬** |

ತಾಲ್ಲೂಕಿನಲ್ಲಿ ಬರುವ ಗ್ರಾಮಗಳ ಇಂದಿನ ಸ್ಥಿತಿಯಂತೂ ತುಂಬಾ ಚಿಂತಾಜನಕವಾಗಿದೆ. ಅದರಲ್ಲೂ ಕೃಷ್ಣಾನದಿಯ ಪ್ರವಾಹದ ಮುಳುಗಡೆಯಾದ ೩೬ ಗ್ರಾಮಗಳ ಸ್ಥಿತಿಶೋಚನೀಯ. ಈ ಗ್ರಾಮಗಳಲ್ಲಿನ ಸಾಮಾಜಿಕ ಸ್ಥಿತಿ, ಆರ್ಥಿಕ ಸ್ಥಿತಿ, ವ್ಯವಸಾಯ ಮತ್ತು ಕೈಗಾರಿಕೆಗಳ ಅಧೋಗತಿ ಹಾಗೂ ಹೆಚ್ಚಿನ ಸಂಖ್ಯೆಯ ಅನಕ್ಷರತೆಯೂ ಎದ್ದು ಕಾಣುತ್ತದೆ. ಗ್ರಾಮಗಳ ಹೀನಸ್ಥಿತಿಗೆ ಇಲ್ಲಿನ ಜನರಲ್ಲಿ ಆವರಿಸಿಕೊಂಡಿರುವ ಅಜ್ಞಾನವೇ ಮುಖ್ಯ ಕಾರಣವೆಂದು ಕಂಡುಕೊಳ್ಳಬಹುದಾಗಿದೆ.

ಇತ್ತೀಚಿನ ಸಮೀಕ್ಷೆಯ ಪ್ರಕಾರ ಈ ಗ್ರಾಮಗಳ ಸ್ಥಿತಿ ತುಂಬಾ ಶೋಚನೀಯವಾಗಿದೆ. ಗ್ರಾಮಗಳಲ್ಲಿ ವ್ಯವಸಾಯದಿಂದ ಬರುವ ಆದಾಯವು ನದಿಗಳ ಪ್ರವಾಹದಿಂದ ಬೆಳೆದ ಬೆಳೆ ಎಲ್ಲವೂ ನೀರಿನಲ್ಲಿ ಕೊಚ್ಚಿಹೋಗಿ ನಿತ್ಯ ಜೀವನದ ನಿರ್ವಹಣೆಗಾಗಿ ಪರದಾಡುವ ಪರಿಸ್ಥಿತಿಯನ್ನು ಎದುರಿಸುತ್ತಿದ್ದಾರೆ. ಈ ಗ್ರಾಮಗಳಲ್ಲಿ ಕೈಗಾರಿಕಾ ಘಟಕಗಳಿಲ್ಲದೆ, ಉದ್ಯೋಗವಿಲ್ಲದೆ ಪರಿತಪಿಸುತ್ತಿರುವುದನ್ನು ಕಾಣಬಹುದಾಗಿದೆ.[೩]

ಜೀವನ ನಿರ್ವಹಣೆಗಾಗಿ ಗ್ರಾಮಗಳನ್ನು ತೊರೆದು ಬೆಂಗಳೂರು, ಪುಣೆ, ಮುಂಬಯಿ. ನಗರಗಳಿಗೆ ವಲಸೆ ಹೋಗುವುದು ದಿನನಿತ್ಯ ಕಂಡುಬರುತ್ತದೆ. ಗ್ರಾಮದಲ್ಲಿ ನಿಸ್ಸಾಯಕ ಸ್ಥಿತಿಯಲ್ಲಿರುವ ವೃದ್ಧರು, ತಮ್ಮ ಅಳಲನ್ನು ತೋಡಿಕೊಂಡು, ಜೀವನ ಉಪಯೋಗಕ್ಕೆ ಸರಕಾರದಿಂದ ಹೊಸ ಯೋಜನೆಗಳಿಗಾಗಿ ಜಾತಕ ಪಕ್ಷಿಗಳಂತೆ ಕಾಯುತ್ತಿರುವುದು ಬಹು ಶೋಚನೀಯವೆನಿಸುತ್ತದೆ. ಇದೇ ಪರಿಸ್ಥಿತಿಯೂ ಮುಂದುವರಿದಲ್ಲಿ, ತಾಲ್ಲೂಕಿನ ಗ್ರಾಮಗಳ

ಗ್ರಾಮೀಣ ಸಂಪ್ರದಾಯಗಳು ನಶಿಸಿ ಹೋಗುವ ಕಾಲ ದೂರವಿಲ್ಲ. ಉದ್ಯೋಗ ಖಾತರಿ ಯೋಜನೆಗೆ ವಾರ್ಷಿಕವಾಗಿ ಬೇಕಾಗುವ ಹಣದ ಪ್ರಮಾಣ ೫೦ ಸಾವಿರ ಕೋಟಿ ರೂಪಾಯಿ ನಿಜವಾಗಿಯೂ ಗ್ರಾಮೀಣ ಜನರ ಬದುಕಿನ ಬಗ್ಗೆ ಕಾಳಜಿಯುಳ್ಳದ್ದಾಗಿ ಯೋಜನೆಯ ಲಾಭಗಳು ಜನತೆಗೆ ಸುಲಭವಾಗಿ ದೊರಕಿಸುವಂತಹ ಪ್ರಾಮಾಣಿಕ ಪ್ರಯತ್ನವನ್ನು ಮಾಡಬೇಕು. ಕೇಂದ್ರ ಸರಕಾರದ ಉದ್ಯೋಗ ಖಾತರಿ ಯೋಜನೆ ಈ ನಿಟ್ಟಿನಲ್ಲಿ ಸ್ವಲ್ಪ ಪ್ರಮಾಣದಲ್ಲಿ ಸಹಾಯ ನೀಡಿದೆ. ಉದ್ಯೋಗ ಖಾತರಿ ಯೋಜನೆ ತಾಲ್ಲೂಕಿನಲ್ಲಿ ಬರಗಾಲ ಮತ್ತು ಪ್ರವಾಹದಿಂದ ಜನರು ವಲಸೆ ಬೇರೆ ಕಡೆಗೆ ಹೋಗುವುದನ್ನು ತಪ್ಪಿಸಲು ಜಾರಿಯಾದ ಈ ಯೋಜನೆಯಿಂದ ಜಿಲ್ಲೆಯಲ್ಲಿ ಕಳೆದ ಒಂದು ವರ್ಷದಿಂದ ಅನೇಕ ಅಭಿವೃದ್ಧಿ ಕೆಲಸಗಳು ಜರುಗಿದೆ. ಇನ್ನು ಹೆಚ್ಚಿನ ಪ್ರಮಾಣದಲ್ಲಿ ಕೆಲಸಗಳು ನಡೆಯಬೇಕಾಗಿದೆ. ಆದರೆ ಕೆಲವೊಂದು ಗ್ರಾಮಗಳಲ್ಲಿ. ವಲಸೆ ಹೋಗುತ್ತಿರುವುದರಿಂದ ಜನವಸತಿ ತುಂಬಾ ಕಡಿಮೆಯಾಗಿ ರಾತ್ರಿಯಲ್ಲಿ ಒಂದು ರೀತಿ ಭಯದ ವಾತಾವರಣ ಸೃಷ್ಟಿಯಾದಂತ ಸ್ಥಿತಿ ಕಂಡುಬರುತ್ತಿದೆ.[೪]

ಇದರ ನಿವಾರಣೆಗಾಗಿ ಗ್ರಾಮಗಳಲ್ಲಿ ಉದ್ಯೋಗ ಸೃಷ್ಟಿಸುವಂತಹ ಯೋಜನೆಗಳು, ವ್ಯವಸಾಯದ ಅಭಿವೃದ್ಧಿಗಾಗಿ ನೀರಾವರಿ ಸೌಲಭ್ಯಗಳು, ಹಾಗೂ ಕೈಗಾರಿಕೆಯಂತ ಸಣ್ಣ ಪುಟ್ಟ ಘಟಕಗಳನ್ನು ಸ್ಥಾಪಿಸಿ ವಲಸೆ ಹೋಗುವುದನ್ನು ತಪ್ಪಿಸಬಹುದು. ಈ ದಿಶೆಯಲ್ಲಿ ಜನಪ್ರತಿನಿಧಿಗಳು, ಗ್ರಾಮದ ಮುಖ್ಯಸ್ಥರು ಇದರ ಬಗ್ಗೆ ಸರಕಾರಕ್ಕೆ ವಾಸ್ತವಿಕ ಪರಿಸ್ಥಿತಿಯನ್ನು ವಿವರಿಸಿ, ಸೂಕ್ತ ಕ್ರಮ ಹಾಗೂ ಸೌಲಭ್ಯ ಪಡೆಯುವ ಕಾತುರದಲ್ಲಿದ್ದುದನ್ನು ಅವಲೋಕಿಸಲಾಯಿತು.

ದೇವದುರ್ಗ ತಾಲ್ಲೂಕು ಎಂದರೆ, ರಾಜ್ಯದ ಜನತೆಗೆ ಒಂದು ಬರಗಾಲದ ಪ್ರದೇಶ ಎಂದು ನೆನಪಿಗೆ ಬರುವುದು. ಹಾಗೂ ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ದಟ್ಟ ದಾರಿದ್ರ್ಯದ ಬದುಕು. ಏಕೆಂದರೆ ಪದೇ ಪದೇ ನೀರಿನ ಪ್ರವಾಹದಿಂದ ತಾಲ್ಲೂಕಿನಲ್ಲಿ ತತ್ತರಿಸಿ ಹೋದ ಗ್ರಾಮಗಳ ಜನರ ಸ್ಥಿತಿ, ಕೆಲವೊಂದು ಗ್ರಾಮಗಳಲ್ಲಿ ಸಾರಿಗೆ ಸಂಪರ್ಕದ ಕೊರತೆಯಿಂದ ಜನತೆ ಅನಾರೋಗ್ಯದಿಂದ ಬಳಲುತ್ತಿದ್ದಾರೆ. ಸಮಯಕ್ಕೆ ಸರಿಯಾಗಿ ಆರೋಗ್ಯ ತಪಾಸಣೆ ಮಾಡಿಸಿಕೊಳ್ಳಲು. ಸೂಕ್ತ ಸಮಯದಲ್ಲಿ ಔಷಧ ಉಪಚಾರ ಪಡೆಯಲು ಸಾಕಷ್ಟು ಪರದಾಡುತ್ತಿದ್ದಾರೆ. ಗ್ರಾಮಗಳ ಜನತೆಯ ಸುರಕ್ಷತೆಗಾಗಿ ಸಾರಿಗೆ ಸಂಪರ್ಕದ ವ್ಯವಸ್ಥೆ ಅತೀ ಅವಶ್ಯವೆಂಬುದನ್ನು ಜನಪ್ರತಿನಿಧಿಗಳ ಗಮನಕ್ಕೆ ತಂದಿದ್ದಾಗ್ಯೂ ಯಾವುದೇ ರೀತಿ ರಸ್ತೆ ಅಭಿವೃದ್ಧಿಯು ಕಂಡುಬಾರದಿರುವುದು ಶೋಚನೀಯವೆನಿಸುತ್ತದೆ. ಗ್ರಾಮದ ಜನತೆಗೆ. ಜನಪ್ರತಿನಿಧಿಗಳಿಗೆ ಈ ಸಮಸ್ಯೆಗಳನ್ನು ಕುರಿತು ಮನವರಿಕೆ ಮಾಡಿದ್ದರೂ ಅದು

ಕಾರ್ಯರೂಪಕ್ಕೆ ಬರುವಲ್ಲಿ ವಿಫಲವಾಗಿದೆ. ಇದಕ್ಕೆ ನಮ್ಮ ರಾಜಕೀಯ ಅಂಧಕಾರವು ಕಾರಣವೆನ್ನಬಹುದು. ಆಗಿ ಶೈಕ್ಷಣಿಕವಾಗಿ ಈ ಪ್ರದೇಶ ಅತ್ಯಂತ ಹಿಂದುಳಿದಿದೆ.

ಉದಾಹರಣೆಗೆ: ಪ್ರೌಢಶಾಲೆಯ ವಿದ್ಯಾರ್ಥಿಗಳು ಲಿಂಗದಹಳ್ಳಿ ಗ್ರಾಮದಿಂದ ಜಾಲಹಳ್ಳಿಗೆ ಅಲೆದಾಡುವ ನಿಸ್ಸಾಯಕತೆಯನ್ನು ಕಂಡುಬರುತ್ತಿದೆ. ಏಕೆಂದರೆ ತಾಲ್ಲೂಕು ಕೇಂದ್ರವಾದ ದೇವದುರ್ಗದಲ್ಲಿ ಕರ್ನಾಟಕ ರಸ್ತೆ ಸಾರಿಗೆ ಘಟಕ ಇಲ್ಲ. ಸ್ವಾತಂತ್ರ್ಯ ಬಂದು ೬೦ ವರ್ಷಗಳು ಗತಿಸಿದರೂ ಈವರೆಗೆ ಸಾರಿಗೆ ಘಟಕದ ಸ್ಥಾಪನೆಯಾಗದೇ ಇರುವುದು ಜನಪ್ರತಿನಿಧಿಗಳ ಅಲಕ್ಷ್ಯ ಧೋರಣೆಯೇ ಕಾರಣವೆನ್ನಬಹುದು. ಇತ್ತೀಚಿಗೆ ದೇವದುರ್ಗದಲ್ಲಿ ರಾಜ್ಯ ರಸ್ತೆ ಸಾರಿಗೆ ಘಟಕದ ಕಾರ್ಯ ಆರಂಭವಾಗಿದ್ದು ಪ್ರಗತಿಯಲ್ಲಿರುವುದು. ಕ್ಷೇತ್ರಕಾರ್ಯ ಸಮೀಕ್ಷೆಯ ಸಮಯದಲ್ಲಿ ಕಂಡುಬಂದಿದೆ. ಹೀಗಾಗಿ ತಾಲ್ಲೂಕು ಆರ್ಥಿಕವಾಗಿ ಅಲ್ಲದೆ ಸಾರಿಗೆ, ಆರೋಗ್ಯ, ಶಿಕ್ಷಣ, ಕೈಗಾರಿಕೆ, ಕೃಷಿ ಇನ್ನೂ ಮುಂತಾದವುಗಳ ಅಭಿವೃದ್ಧಿಯಲ್ಲಿ ಜನತೆ ಹಿನ್ನಡೆ ಅನುಭವಿಸುತ್ತಿರುವ ಸ್ಥಿತಿ ಸರ್ವೇಸಾಮಾನ್ಯವಾಗಿದೆ.

ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ೩೬ ಗ್ರಾಮಗಳಿಗೆ ಸಂಬಂಧಿಸಿದಂತೆ ತಾಲ್ಲೂಕಿನ ಮುಳುಗಡೆ ಪ್ರದೇಶದಲ್ಲಿ ಕೇವಲ ನಾಲ್ಕು ಆರೋಗ್ಯ ಕೇಂದ್ರಗಳಿದ್ದು ಇದು ಜನಸಂಖ್ಯೆಯ ಆಧಾರದ ಮೇಲೆ ಅತಿ ಕನಿಷ್ಟ ಸೌಲಭ್ಯವೆಂದು ಪರಿಗಣಿಸಬಹುದಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ಗ್ರಾಮಗಳ ಸ್ಥಿತಿ–ಗತಿಗಳ ಬಗ್ಗೆ ಅವಲೋಕಿಸುತ್ತಾ ಹೋದಂತೆ ಗ್ರಾಮಗಳು ಪ್ರವಾಹ ಸಂದರ್ಭದಲ್ಲಿ ಅನೇಕ ಕಷ್ಟ ನಷ್ಟಗಳನ್ನು ಅನುಭವಿಸಿರುವ ದೃಶ್ಯವನ್ನು ಕ್ಷೇತ್ರದ ಸಮೀಕ್ಷೆಯಲ್ಲಿ ಜನತೆ ತೋಡಿಕೊಂಡಿರುವ ಭಾವನೆಗಳ ಪ್ರಕಾರ ಸುಮಾರು ೨೫ ವರ್ಷಗಳ ಹಿಂದೆ ಪ್ರವಾಹದ ಭೀಕರತೆ ಎದುರಿಸಿದ ಗ್ರಾಮಗಳಲ್ಲಿ ಬುದ್ದಿನ್ನಿ ಎಂಬ ಗ್ರಾಮವು ಅನೇಕ ತೊಂದರೆಗಳಿಗೀಡಾಗಿ, ಜನರು ಹಲವಾರು ರೋಗ ರುಜಿನಿಗಳಿಗೆ ತುತ್ತಾದರು. ನಂತರ ಆ ಗ್ರಾಮವನ್ನು ತೊರೆದು ಜಾಲಹಳ್ಳಿ ಗ್ರಾಮಕ್ಕೆ ವಲಸೆ ಬಂದ ವಿಷಯ ನಾನು ಕ್ಷೇತ್ರಕಾರ್ಯ ಮಾಡುವಾಗ ಬುದ್ಧಿನ್ನಿ ಗ್ರಾಮದ ನಿವಾಸಿ ಹಾಗೂ ಗ್ರಾಮದ ಗೌಡನಾದ ಬಸವರಾಜ ಇವರು ಮಾಹಿತಿ ನೀಡಿದರು.[೫]

೨೦೦೫ರಲ್ಲಿ ಆದ ಪ್ರವಾಹದ ಭೀಕರತೆ ಕೂಡ ಇದಕ್ಕಿಂತ ಭಿನ್ನವಾಗೇನು ಕಂಡುಬಂದಿಲ್ಲ. ದೇವದುರ್ಗ ತಾಲ್ಲೂಕಿನಲ್ಲಿ ಕೃಷ್ಣಾನದಿ ಪ್ರವಾಹದಲ್ಲಿ ೩೬ ಗ್ರಾಮಗಳು ಮುಳುಗಡೆಯಾಗಿರುತ್ತವೆ. ಗ್ರಾಮಗಳ ಸ್ಥಿತಿ-ಗತಿ ಕಲ್ಪನಾತೀತ. ವಿದ್ಯುತ್ ಸಂಪರ್ಕ ಕಡಿದು ಹೋಗಿ ಕುಡಿಯುವ ನೀರಿನ ಸಮಸ್ಯೆ ಎದುರಾಗಿ, ರೈತರು ಕೃಷಿಗೆ ಹಾಕಿದ ಫಸಲು ನೀರಿನಲ್ಲಿ ಕೊಚ್ಚಿಹೋಗಿ, ಹಾಕಿರುವ ಬಂಡವಾಳ ಹಿಂದಿರುಗಿ ಬರುವ ಭರವಸೆ ಅವರ ಕನಸಾಗೆ ಉಳಿದಿರುತ್ತದೆ. ಹೀಗೆ ಇಂತಹ ಹಲವಾರು ಸಮಸ್ಯೆಗಳು, ಗ್ರಾಮಗಳ ಸ್ಥಿತಿಯನ್ನು ಎಂತಹ

ಮಟ್ಟಿಗೆ ಬದಲಾಯಿಸುತ್ತವೆ ಎಂದರೆ ಜನರು ತಮ್ಮ ಜೀವನ ನಿರ್ವಹಣೆಗೆ ಬೇರೆ ಗ್ರಾಮಗಳಿಗೆ ವಲಸೆ ಹೋಗಿ, ಆಶ್ರಯ ಪಡೆಯುವ ಅನಿವಾರ್ಯ ಸ್ಥಿತಿ ಇರುವುದು ಸೋಜಿಗವೇ ಸರಿ.

ಲಿಂಗದಹಳ್ಳಿ, ಹೇರುಂಡಿ, ಅಂಜಳ, ಬಾಗೂರು ಹೀಗೆ ಇನ್ನೂ ಅನೇಕ ಗ್ರಾಮಗಳು ಪ್ರವಾಹದಲ್ಲಿ ಮುಳುಗಡೆಯಾಗಿ, ರಸ್ತೆ ಸಂಪರ್ಕ ಕಡಿದುಹೋಗಿ, ಶಾಲಾ ಮಕ್ಕಳು ಹರಿಯುವ ನೀರಿನಲ್ಲಿ ಹೇಗೆ ಶಾಲೆಗೆ ಹೋಗುವುದು ಎಂಬ ಭೀತಿಯಲ್ಲಿ ಪ್ರವಾಹದ ಕಡೆಗೆ ತಮ್ಮ ನೋಟವನ್ನು ಬೀರುತ್ತಾ ಅಸಹಾಯಕರಾಗಿರುವ ಸಮಸ್ಯೆಗಳನ್ನು ತಂದೊಡ್ಡಿ ಜನರ ತಮ್ಮ ಕೆಲಸ ಕಾರ್ಯಗಳಿಗೆ ವಿರಾಮ ಹೇಳುವ ಸ್ಥಿತಿ ಬಂದೊದಗಿರುವ ಸಂಗತಿಯಾಗಿ ಅಳಲನ್ನು ತೋಡಿಕೊಂಡರು. ವೀರಗೋಟ ಗ್ರಾಮದ ಜನರು ಮೀನು ಹಿಡಿಯುವುದನ್ನು ತಮ್ಮ ಉಪಜೀವನದ ಕಾಯಕ ಎಂದುಕೊಂಡಿರುವಾಗ, ಪ್ರವಾಹವು ಬಂದು ಇವರ ಕಾಯಕವನ್ನೇ ಕೊಚ್ಚಿಕೊಂಡು ಹೋದ ಇಂತಹ ಪ್ರವಾಹ ಅವರ ಜೀವನದಲ್ಲಿ ಬದುಕುವ ದಿಕ್ಕನ್ನೇ ಬದಲಾಯಿಸಿ ಅವರನ್ನು ಅಧೋಗತಿಗೆ ನಿಲ್ಲಿಸಿರುವುದು ಶೋಚನಿಯ ವಿಷಯ.

ಮೆದುರಗೋಳ ಗ್ರಾಮದಲ್ಲಿ ಪ್ರವಾಹ ಬಂದು ಈ ಗ್ರಾಮ ಹೆಚ್ಚಿನ ತೊಂದರೆಗೀಡಾಗಿ, ಜನರು ನಿರ್ವಸತಿಗರಾಗಿ, ಕೃಷಿ ಭೂಮಿ ಎಲ್ಲಾ ಕೊಚ್ಚಿಹೋಗಿ ರಸ್ತೆ ಸಂಪರ್ಕ ಕಡಿದುಹೋಗಿ, ಜನರು ಅನೇಕ ಸಮಸ್ಯೆಗಳಿಗೆ ತುತ್ತಾಗಿ ಸರ್ಕಾರಕ್ಕೆ ಈ ಗ್ರಾಮದ ಜನತೆ ಮೊರೆ ಹೋದಾಗ, ನಿರ್ವಸತಿಗರಿಗೆ, ವಸತಿ ಸೌಲಭ್ಯ ಕಲ್ಪಿಸುವುದಾಗಿ ಆಶ್ವಾಸನೆ ನೀಡಿದ್ದರೂ ಇದುವರೆಗೂ ಸರಕಾರದ ಈ ಪರಿಹಾರ ಕಾರ್ಯ ಇನ್ನೂ ಕಾರ್ಯರೂಪಕ್ಕೆ ಬಂದಿಲ್ಲ. ಆದ್ದರಿಂದ ಜನರು ತಮ್ಮ ಗ್ರಾಮವನ್ನು ಪ್ರವಾಹದ ಭೀತಿಯಿಂದ ರಕ್ಷಿಸಲು, ಪರಿಹಾರ ಯಾವಾಗ ಸಿಗುವುದೆಂದೂ ನಿರೀಕ್ಷಿಸುತ್ತಾ ಜೀವನ ಸಾಗಿಸುತ್ತಿರುವ ಬಡತನದ ದೃಶ್ಯ ಮುಳುಗಡೆಯಾದ ಗ್ರಾಮಗಳಲ್ಲಿ ಕಂಡುಬರುತ್ತದೆ.

ಪ್ರವಾಹ ಬಂದಾಗ ಅಲ್ಲಿನ ಭೂಮಿ ಕುಸಿದು ಮನೆಗಳು ಕುಸಿದುಹೋದ ಹಲವಾರು ನಿದರ್ಶನಗಳು ಇಲ್ಲಿವೆ. ಸದ್ಯ ಆ ಗ್ರಾಮದ ಜನರ ಸ್ಥಿತಿ ಈಗಲೂ ಚಿಂತಾಜನಕ. ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳಲ್ಲಿ ಆದ ವಾಸ್ತವಿಕ ಸ್ಥಿತಿ-ಗತಿಗಳನ್ನು ಪತ್ರಿಕೆಯಲ್ಲಿ ಪ್ರಕಟಗೊಂಡ ಕೆಲವೊಂದು ಘಟನೆಗಳ ವಿವರಗಳನ್ನು ಅವಲೋಕಿಸಬಹುದು. ಈ ಕೆಳಗೆ ಕಾಣಿಸಿದ ಗ್ರಾಮಗಳು ಪ್ರವಾಹದಲ್ಲಿ ಅನುಭವಿಸಿದ ಹಾನಿಯ ಅನಾಹುತ ಸ್ಥಿತಿಗಳ ಸ್ಪಷ್ಟ ಚಿತ್ರಣವು ಈ ಕೆಳಗಿನಂತೆ ಉಲ್ಲೇಖಿಸಲಾಗಿದೆ.

ದಿನಾಂಕ.೦೩.೦೮.೨೦೦೬ರಂದು ರಾಯಚೂರುವಾಣಿಯಲ್ಲಿ ಪ್ರಕಟಗೊಂಡಂತೆ, ಕಳೆದ ವರ್ಷ ಕೃಷ್ಣಾನದಿ ನೆರೆಹಾವಳಿಗೆ ಆಸ್ತಿ–ಪಾಸ್ತಿ, ಜೀವಹಾನಿ, ಬೆಳೆಹಾನಿಯುಂಟಾಗಿ, ಅಪಾರ

ನಷ್ಟಕ್ಕೊಳಗಾಗಿದ್ದು, ಜನತೆಗೆ ಅಂದು ತೀವ್ರಗೊಂಡ ನದಿಯ ರಭಸದಿಂದ ಪುನಃ ನದಿ ತೀರದ ಜನತೆ ಆತಂಕಕ್ಕೀಡಾಗಿದ್ದಾರೆ.[೭]

ಕಳೆದ ವರ್ಷ ೨೦೦೫-೦೬ನೇ ಸಾಲಿನಲ್ಲಿ ಆಲಮಟ್ಟಿ ಮತ್ತು ನಾರಾಯಣಪುರ ಜಲಾಶಯಗಳಿಂದ ೩ ಲಕ್ಷ ೬೭ ಸಾವಿರ ಕ್ಯೂಸೆಕ್ಸ್ ನೀರು ನದಿಗೆ ಬಿಡಲಾಗಿದೆ ಎಂದು ಪತ್ರಿಕೆ, ದೃಶ್ಯಮಾಧ್ಯಮ ಹಾಗೂ ಸರ್ಕಾರಿ ದಾಖಲೆಗಳಿಂದ ತಿಳಿದುಬಂದಿದೆ.

ರಾತ್ರಿಯೂ ೪೦ ಲಕ್ಷಕ್ಕೂ ಕ್ಯೂಸೆಕ್ಸ್ ಮೇಲ್ಪಟ್ಟು ನೀರನ್ನು ನದಿಗೆ ಬಿಟ್ಟಿರುವುದರಿಂದಾಗಿ. ನೀರಿನಲ್ಲಿ ಮುಳುಗಿದ ಸೇತುವೆ ಕಳೆದ ಸಾರಿಯಂತೆ. ಈ ಬಾರಿಯೂ ೨೦೦೬ರಲ್ಲಿ ರಾಯಚೂರು. ಕಲ್ಬುರ್ಗಿ ಜಿಲ್ಲೆಗಳ ಸಂಪರ್ಕ ಕಲ್ಪಿಸುವ ಹೂವಿನಹಡಿಗಿ, ಕೊಳ್ಳುರು ಸೇತುವೆ ಸಂಪೂರ್ಣ ನೀರಿನಲ್ಲಿ ಮುಳುಗಿ, ೨೦೦೫-೦೬ರಲ್ಲಿ ಆದ ಪ್ರವಾಹದಿಂದ ಸಂಚಾರ ಅಸ್ತವ್ಯಸ್ತಗೊಂಡು ರಾಯಚೂರಿನಿಂದ ಗುಲಬರ್ಗಾಗೆ ಬಂದು ಹೋಗುವ ಎಲ್ಲಾ ವಾಹನಗಳನ್ನು ಸುತ್ತುವರಿದು ತಿಂಥಿಣಿ ಸೇತುವೆ ಮೂಲಕ ಬಂದು ಹೋಗುವಂತ ಸ್ಥಿತಿ ಉಂಟಾಗಿ ಜನತೆ ಸಂಚಾರಕ್ಕಾಗಿ ೮೦ ಕಿ.ಮೀ.ಗಿಂತ ದೂರದ ಪ್ರವಾಸಕ್ಕೆ ಹೆಚ್ಚು ತೊಂದರೆ ಅನುಭವಿಸಿದರು.[೮]

ತಾಲ್ಲೂಕಿನ ಆಡಳಿತದ ಮುನ್ನೆಚ್ಚರಿಕೆ ಕ್ರಮದಿಂದ ನದಿ ತೀರದ ಹಳ್ಳಿಗಳಾದ ವೀರಗೋಟ, ಲಿಂಗದಹಳ್ಳಿ, ಅಂಜಳ, ಅಂಚೆಸೂಗೂರು, ಗೋಪಾಳಪುರ, ಹೂವಿನಹಡಿಗಿ, ಚೋಳದಡಿಗಿ, ಬೆಣಕಲ್, ಮೆದರಗೋಳ, ಕೊಪ್ಪರ, ಇಟಗಿ, ಗೂಗಲ್, ಗಾಗಲ್ ಸೇರಿದಂತೆ ಸರಾಸರಿ ೩೬ ಹಳ್ಳಿಗಳ ಜನತೆಯನ್ನು ಕಾಡುವ ಈ ನೆರೆಹಾವಳಿಯ ಭೀತಿಯನ್ನು ಎದುರಿಸುತ್ತವೆ. ಇವುಗಳಲ್ಲಿ ಮೆದುರಗೋಳ ಗ್ರಾಮದ ಸ್ಥಿತಿಯು ಅತೀ ಚಿಂತಾಜನಕವಾಗಿದೆ.

ನಿಸ್ಸಾಹಾಯಕತೆ ಎದುರಿಸುತ್ತಿರುವ ಮೆದರಗೋಳ ಗ್ರಾಮವು ದೇವದುರ್ಗದಿಂಟ ಕೇವಲ ೧೫ ಕಿ.ಮೀ. ದೂರದಲ್ಲಿರುವ ಒಂದು ಪುಟ್ಟ ಗ್ರಾಮ. ಸುಮಾರು ೬೦ ಅಥವಾ ೭೦ ಕುಟುಂಬಗಳು ಈ ಗ್ರಾಮದಲ್ಲಿ ವಾಸಿಸುತ್ತಿದ್ದು, ಇಂದಿಗೂ ಅಧಿಕಾರಿ ಮತ್ತು ಜನಪ್ರತಿನಿಧಿಗಳ ನಿರ್ಲಕ್ಷ್ಯದಿಂದ ಅಗತ್ಯ ಸೌಲಭ್ಯದಿಂದ ವಂಚಿತಗೊಂಡಿದೆ.

ತಾಲ್ಲೂಕಿಗೆ ಇಂದಿಗೂ ವರ್ಗಾವಣೆಯಾಗಿ ಬರುವ ಯಾವೊಬ್ಬ ಅಧಿಕಾರಿಗಳು ಈ ಗ್ರಾಮ ಎಲ್ಲಿ ಬರುತ್ತದೆ ಎಂದು ತಿಳಿದುಕೊಳ್ಳುವ ಗೋಜಿಗೆ ಹೋಗದಿರುವುದು ಒಂದು ಕಡೆಯಾದರೆ, ಇನ್ನೂ ಜನ ಪ್ರತಿನಿಧಿಗಳಾದರೂ ಇರುವ ೬೦-೭೦ ಕುಟುಂಬಗಳ ಓಟು ತಮಗೆ ಯಾವ ಲೆಕ್ಕ ಎಂಬಂತೆ ಅತ್ತ ಕಡೆ ಸುಳಿದಿಲ್ಲ ಎಂಬುದು ಗ್ರಾಮಸ್ಥರ ಅಳಲಾಗಿದೆ.[೯]

ಇಲ್ಲಿರುವ ೬೦ ಕುಟುಂಬಗಳ ಪೈಕಿ ಕೆಲವರು ತಮ್ಮ ಹೊಲದ ಕೆಲಸಕ್ಕೆಂದು ಹೋದರೆ, ಇತರರು ಪಕ್ಕದ ಗ್ರಾಮಗಳಿಗೆ ಹೋಗಿ ಕೂಲಿ ಮಾಡುವುದು ದಿನನಿತ್ಯದ ಕಾಯಕವಾಗಿದೆ. ಸ್ವಾತಂತ್ರ್ಯ ಸಿಕ್ಕು ೬೦ ವರ್ಷಗಳು ಕಳೆದರೂ ಮೆದುರಗೋಳ ಗ್ರಾಮಕ್ಕೆ ರಸ್ತೆ ಇಲ್ಲದೇ ಕಾಲುದಾರಿಯೇ ಆಶ್ರಯವಾಗಿದೆ. ಗ್ರಾಮಗಳಿಗೆ ಕುಡಿಯುವ ನೀರಿನ ವ್ಯವಸ್ಥೆ ಇಲ್ಲ. ಶೈಕ್ಷಣಿಕವಾಗಿ ಅಭಿವೃದ್ಧಿ ಹೊಂದಲು ಮಕ್ಕಳಿಗೆ ಸೌಲಭ್ಯದ ಕೊರತೆ. ಒಂದಿಷ್ಟು ನದಿ ದಂಡೆಯ ಜಮೀನುಗಳಿಗೆ ರೈತರು ನೀರಾವರಿ ಪಡೆಯಬೇಕೆಂದರೆ, ವಿದ್ಯುತ್ ಸಂಪರ್ಕ ಇಲ್ಲ. ಒಟ್ಟಾರೆ ಯಾವುದೇ ಮೂಲಭೂತ ಸೌಕರ್ಯಗಳಿಲ್ಲ.

ಕಳೆದ ಬಾರಿ ಕೃಷ್ಣಾನದಿಗೆ ದಾಖಲೆ ಪ್ರಮಾಣದ ನೀರು ಹರಿದು ಬಂದಾಗ ಗ್ರಾಮ ಜಲಾವೃತಗೊಂಡಿರುವುದನ್ನು ಮೂರು ದಿನದ ನಂತರ ಕೊನೆಗೆ ಗ್ರಾಮಸ್ಥರಿಂದಲೇ ಅಧಿಕಾರಿಗಳು ತಿಳಿದುಕೊಳ್ಳಬೇಕಾದ ಪ್ರಸಂಗ ನಡೆಯಿತೆಂದು ಹಾಗೂ ಸುಮಾರು ೩೦ ದಿನಗಳ ಕಾಲ ಊರಿನ ಹೊರಗಡೆ ವಾಸಿಸಲು ತಾಲ್ಲೂಕು ಆಡಳಿತ ವ್ಯವಸ್ಥೆ ಮಾಡಿದ್ದನ್ನು ಗ್ರಾಮಸ್ಥರು ನಿವೇದಿಸಿಕೊಂಡುದಲ್ಲದೆ ಗ್ರಾಮದ ೩ ಕಿ.ಮೀ. ರಸ್ತೆ ಅಭಿವೃದ್ಧಿಗಾಗಿ ಜಿಲ್ಲಾ ಪಂಚಾಯತಿಯೂ ೧೮ ಲಕ್ಷ ರೂಪಾಯಿ ಕಾಮಗಾರಿ ಕಾರ್ಯ ಪೂರ್ಣಗೊಂಡಿದೆ.[೧೦]

ಇದರ ಜೊತೆಗೆ ಗ್ರಾಮವನ್ನು ಬೇರೆಡೆಗೆ ಸ್ಥಳಾಂತರಿಸಲೂ ಗ್ರಾಮಸ್ಥರಿಗೆ ಆಗಿನ ಜಿಲ್ಲಾ ಸಚಿವರು ಸೇರಿದಂತೆ ಅಧಿಕಾರಿಗಳ ಬಾಯಿ ತುಂಬ ಮಾತು ಕೊಟ್ಟು, ನಿವೇಶನಕ್ಕಾಗಿ ಗ್ರಾಮದ ಸಿದ್ದರಾಮರೆಡ್ಡಿ ತಂದೆ ಭೀಮನಗೌಡ ಇವರ ಹೊಲ ಕೊಡಲು ಒಪ್ಪಿಕೊಂಡು, ಪುನಃ ಖರೀದಿ ದರದಲ್ಲಿ ಹೊಂದಾಣಿಕೆಯಾಗದೇ, ನಿವೇಶನ ಪ್ರಕ್ರಿಯೆ ವಿಳಂಬ ಹಂತದಲ್ಲಿದ್ದು, ಯಾವಾಗ ನಿರ್ಧಾರವಾಗುವುದು ಎಂದು ಗ್ರಾಮಸ್ಥರು ಹಿಡಿ ಶಾಪ ಹಾಕುತ್ತಿರುವುದನ್ನು ಸಮೀಕ್ಷೆಯಲ್ಲಿ ಗಮನಿಸಲಾಯಿತು. ಅಲ್ಲದೆ ಹೊಲದ ಮಾಲೀಕರು ಹೊಲ ಖರೀದಿಗೆ ಕೊಡಲು ನಿರಾಕರಿಸಿದ ಪ್ರಯುಕ್ತ ಜಿಲ್ಲಾಧಿಕಾರಿಗಳ ಆದೇಶದಂತೆ ಸಹಾಯಕ ಆಯುಕ್ತರು ರಾಯಚೂರು ಸಂಬಂಧಿಸಿದವರಿಗೆ ನೋಟಿಸ್ ನೀಡಿ ಸಂಬಂಧಿಸಿದ ಗ್ರಾಮ ಲೆಕ್ಕಿಗರಿಂದ ನೋಟಿಸ್ ಜಾರಿಗೊಳಿಸಲೂ ಸೂಚಿಸಿದ್ದಾಗ್ಯೂ ಹೊಲದ ಮಾಲೀಕರು ನೋಟಿಸ್ ತೆಗೆದುಕೊಳ್ಳಲು ನಿರಾಕರಿಸಿದ ಪ್ರಯುಕ್ತ ನೋಟಿಸನ್ನು ಗ್ರಾಮದ ಪ್ರಸಿದ್ಧ ಸ್ಥಳವಾದ ಮಾರುತಿ ದೇವರ ಗುಡಿಗೆ ಅಂಟಿಸಿರುವ ವಿಷಯ ಗ್ರಾಮ ಲೆಕ್ಕಿಗರು ಗ್ರಾಮಕ್ಕೆ ಸಂದರ್ಶಿಸಿದ ಸಮಯದಲ್ಲಿ ಈ ಮಾಹಿತಿಯನ್ನು ತಿಳಿಸಿದರು. ಅದರ ಪ್ರತಿಗಳನ್ನು ನಮ್ಮ ಗಮನಕ್ಕೆ ತಂದು. ಪ್ರತಿ ಕೊಟ್ಟಿರುವುದನ್ನು ಉಲ್ಲೇಖಿಸಲಾಗಿದೆ. ನೋಟೀಸ್ ಸಂಖ್ಯೆ.ಭೂಸ್ವಾಧೀನ. ಸಾಮಾನೋ. ದಿನಾಂಕ.೦೨.೦೨.೨೦೦೭.[೧೧] ಒಟ್ಟಾರೆಯಾಗಿ ಗ್ರಾಮಗಳ ಸದ್ಯದ ಸ್ಥಿತಿಗತಿ ಚಿತ್ರಣವನ್ನು ಚರ್ಚಿಸಲಾಗಿದೆ.

## ೨.೨ ಕೃಷಿ :

ಗ್ರಾಮಗಳ ಕೃಷಿಯ ಬಗ್ಗೆ ವಿಮರ್ಶಿಸುತ್ತಾ ಹೋದಾಗ ಭಾರತವು ಹಳ್ಳಿಗಳ ನಾಡು. ಹಳ್ಳಿ ಎಂದಾಕ್ಷಣ ಅದಕ್ಕೆ ಕೃಷಿಯೂ ಹೊಂದಿಕೊಂಡಿರುತ್ತದೆ. ಗ್ರಾಮ ಜೀವನ ಮತ್ತು ವ್ಯವಸಾಯ ಒಂದಕ್ಕೊಂದು ಬೆಸೆಯಲ್ಪಟ್ಟು ಪೂರಕವಾಗಿದೆ. ವ್ಯವಸಾಯವು ಭಾರತೀಯ ಹಳ್ಳಿಗರ ಪ್ರಮುಖ ಜೀವನಾಧಾರ. ಶೇಕಡ ೭೦ರಷ್ಟು ಜನರು ಕೃಷಿ ಮತ್ತು ಕೃಷಿಯಾಧಾರಿತ ಹಾಗೂ ಗುಡಿ ಕೈಗಾರಿಕೆ ವೃತ್ತಿಗಳನ್ನು ಅವಲಂಬಿಸಿದ್ದಾರೆ. ಕೃಷಿ ಭಾರತೀಯ ಗ್ರಾಮೀಣ ಜನರ ಜೀವನಾಧಾರವಾಗಿದೆ. ಅಲ್ಲದೇ ಗ್ರಾಮದ ಪ್ರಮುಖ ಜೀವನ ಮಾರ್ಗ. ಆರ್ಥಿಕತೆಯ ಸಾಧನ, ಆದಾಯದ ಪ್ರಮುಖ ಮೂಲ. ವ್ಯವಸಾಯವು ಭಾರತೀಯರೆಲ್ಲರಿಗೂ ಅನ್ನವನ್ನು ಒದಗಿಸುವ ಆರ್ಥಿಕತೆಯ ಬೆನ್ನೆಲುಬು. ಕೃಷಿ ಮತ್ತು ಗ್ರಾಮ ಎರಡು ಪರಸ್ಪರ ಆಧಾರಿತವಾದವು. ಕೃಷಿ ಇಲ್ಲದೇ ಗ್ರಾಮ ಇರಲು ಸಾಧ್ಯವಿಲ್ಲ. ಕೃಷಿಯಿಲ್ಲದ ಗ್ರಾಮಗಳಿರುವುದು ಅಪರೂಪ. ಕೃಷಿ ಅಭಿವೃದ್ಧಿ ಹೊಂದಿರುವ ಗ್ರಾಮಗಳು ಸಂಪದ್ಭರಿತವಾಗಿದ್ದು, ಕೃಷಿಯಿಲ್ಲದೆಡೆ ಅವು ಏಳಿಗೆ ಹೊಂದಿರುವುದಿಲ್ಲ. ಈ ದಿಶೆಯಲ್ಲಿ ದೇವದುರ್ಗ ತಾಲ್ಲೂಕಿನ ಕೃಷ್ಣಾನದಿಯ ಪ್ರವಾಹದಲ್ಲಿ ಮುಳುಗಡೆಯಾದ ೩೬ ಗ್ರಾಮಗಳ ಕೃಷಿಯ ಚಟುವಟಿಕೆಯ ಕುರಿತು ಕ್ಷೇತ್ರಕಾರ್ಯದ ದಿನಗಳಲ್ಲಿ ಫಲಿತಗಳನ್ನು ಕಂಡುಕೊಳ್ಳಲಾಗಿದೆ. ಸಮೀಕ್ಷೆಯಲ್ಲಿ ಕಂಡುಬಂದಿರುವ ಸಂಗತಿಗಳ ಸಂಕ್ಷಿಪ್ತ ವಿವರಗಳನ್ನು ರಾಯಚೂರು ಜಿಲ್ಲೆಯ ಈ 'ಪ್ರವಾಹಪೀಡಿತ ಪ್ರದೇಶಗಳ ಸಮಗ್ರ ವರದಿ' ಎಂಬುದರಲ್ಲಿ ವಿವರಿಸಲಾಗಿದೆ. (ರಾಯಚೂರು ಜಿಲ್ಲಾಡಳಿತ ಪ್ರಕಟಣೆ) ದೇವದುರ್ಗ ತಾಲ್ಲೂಕು ಎಂದಾಕ್ಷಣ ರಾಜ್ಯದ ಜನತೆಗೆ ಒಂದು ಬರಗಾಲ ಪ್ರದೇಶ ಎಂದು ನೆನಪಿಗೆ ಬರುವುದು. ಕಡುಬಡತನದ ಘೋರ ಬದುಕಿನ ಚಿತ್ರಣ. ಹಿಂದಿನಿಂದಲೂ ಕೃಷಿ, ಮಳೆಯನ್ನು ಆಧರಿಸಿರುವುದು. ಅಕಾಲಿಕ ಮಳೆಯಿಂದಾಗಿ ಆರ್ಥಿಕ ಸಂಪನ್ಮೂಲಗಳ ಕೊರತೆಯಿಂದ ಸದಾ ಬರಗಾಲಕ್ಕೆ ತುತ್ತಾಗುವ ದೂರದೃಷ್ಟಿ ಜನತೆ ಅಭಿವೃದ್ಧಿಯಲ್ಲಿ ಸಾಕ್ಷರತೆಯಲ್ಲಿಯೂ ತೀರಾ ಹಿಂದುಳಿದಿದೆ. ಈ ಸ್ಥಿತಿಯನ್ನು ಹೋಗಲಾಡಿಸಲು ಸರಕಾರವು ಅನೇಕ ಸಾಕ್ಷರತಾ ಆಂದೋಲನ ಕಾರ್ಯಕ್ರಮಗಳನ್ನು ನಡೆಸಿರುವುದು ಕಾಣಬಹುದು. ಈ ಪ್ರದೇಶಗಳಲ್ಲಿ ನೀರಾವರಿ ಸೌಲಭ್ಯ ಒದಗಿಸಲು ಕೃಷ್ಣಾ ಮೇಲ್ದಂಡೆ ಯೋಜನೆ ಅಡಿಯಲ್ಲಿ ೩೬ ಗ್ರಾಮಗಳು ಬರುತ್ತಿದ್ದಾಗ್ಯೂ ಇದುವರೆಗೂ ಯಾವ ಪ್ರಗತಿ ಕಾಣದೇ ವಿಳಂಬ ನೀತಿಯಿಂದ ಸೌಲಭ್ಯ ವಂಚಿತರಾಗಿ ಕಷ್ಟ ಪಡುತ್ತಿರುವುದು ಸರ್ವೇಸಾಮಾನ್ಯ ಎಂದು ಹೇಳಬಹುದು.[೧೨]

ತಾಲ್ಲೂಕಿನ ಭೌಗೋಳಿಕ ವಿಸ್ತೀರ್ಣ ಅನ್ವಯ ೧ ಲಕ್ಷ ೫೯ ಸಾವಿರ ೬೨೯ ಹೆಕ್ಟೇರ್ ಸಾಗುವಳಿಗೆ ಯೋಗ್ಯವಾಗಿದ್ದು, ಯೋಜನೆಯಲ್ಲಿ ೭೨ ಸಾವಿರ ಹೆಕ್ಟೇರ್ ನೀರಾವರಿಗಾಗಿ[೧೩] ಮಂಜೂರಾತಿಯಾಗಿದ್ದರೂ ಸಹ ನಾರಾಯಣಪುರ ಬಲದಂಡೆ ಯೋಜನೆಯಲ್ಲಿ ಕೇವಲ

೪೪,೪೨೫ ಸಾವಿರ ಹೆಕ್ಟೇರ್ ಪ್ರದೇಶದಷ್ಟು ಮಾತ್ರ ನೀರಾವರಿಯಾಗಿರುತ್ತದೆ.[೧೪] ಉಳಿದಂತೆ ಇರುವ ಭೂಮಿ ಮಳೆಯನ್ನಾಧರಿಸಿದ ಕೃಷಿ ಪದ್ಧತಿಯನ್ನು ಹೊಂದಿದೆ. ಬಿಳಿಜೋಳ, ಹತ್ತಿ, ಸೂರ್ಯಕಾಂತಿ, ಕಡಲೆ, ಸಜ್ಜೆ, ಶೇಂಗಾ, ತೊಗರಿ ಈ ಪ್ರದೇಶದ ಪ್ರಮುಖ ಬೆಳೆಗಳಾಗಿವೆ. ನೀರಾವರಿ ಪ್ರದೇಶದಲ್ಲಿ ಭತ್ತ, ಹತ್ತಿ ಬೆಳದರೆ ಜಾಲಹಳ್ಳಿ ಹೋಬಳಿಯಲ್ಲಿ ಬರುವ ಗ್ರಾಮಗಳಲ್ಲಿ ಶೇಂಗಾ, ಉಳ್ಳಾಗಡ್ಡೆ, ಸಜ್ಜೆ ಪ್ರಮುಖ ಬೆಳೆಯಾಗಿವೆ.

ಗ್ರಾಮಗಳಲ್ಲಿ ಶೇಕಡ ೮೦ರಷ್ಟು ಕೃಷಿಭೂಮಿ ಮಳೆಯನ್ನು ಅವಲಂಬಿಸಿರುವುದರಿಂದ ೨೦೦೫-೦೬ನೇ ಸಾಲಿನಲ್ಲಿ ಅಕಾಲಿಕವಾಗಿ ಕೃಷ್ಣಾನದಿಯ ಪ್ರವಾಹದಿಂದ ಬೆಳೆದ ಬೆಳೆಯಲ್ಲಾ ನೀರಿನಲ್ಲಿ ಮುಳುಗಿತು. ನಂತರ ರೈತರು ಬೆಳೆದ ಬೆಳೆಗೆ ಬೆಲೆಯಿಲ್ಲದೇ, ಭೂಮಿಗೆ ಹಾಕಿದ ಬಂಡವಾಳವು ಹಿಂದಿರುಗದೇ ಆರ್ಥಿಕವಾಗಿ ಅತಂತ್ರ ಸ್ಥಿತಿಯಲ್ಲಿ ತೊಳಲಾಡುತ್ತಿರುವಾಗ ಸರಕಾರವು ಬೆಳೆದ ಬೆಳೆ ನಾಶವಾಗಿದ್ದನ್ನು ಸಮೀಕ್ಷೆ ನಡೆಸಿ ರೈತನು ಬೆಳೆದ ೧೦,೦೦೦ ರೂಪಾಯಿ ಬೆಳೆ ಹಾನಿಗೆ ಕೇವಲ ೮೦೦ ರೂಪಾಯಿ ಪರಿಹಾರ ಧನ ಪಡೆದು ಗ್ರಾಮದ ಜನತೆ ಕಂಗಾಲಾಗಿರುವ ನೋಟ ಪಡುತ್ತಿರುವ ತೊಂದರೆ ಅಸಾಧ್ಯ. ಕೆಲವೊಂದು ಗ್ರಾಮಗಳಲ್ಲಿ ಪಂಪ್‌ಸೆಟ್‌ನಿಂದ ನೀರಾವರಿ ಸೌಲಭ್ಯ ಪಡೆದಿದ್ದಾಗ್ಯೂ ರೈತರು ವಿದ್ಯುತ್ ಕಡಿತದಿಂದ ಬೆಳೆದ ಬೆಳೆಗಳು ನೀರಿಲ್ಲದೇ ಕಮರಿಹೋಗಿವೆ. ಅಲ್ಪ-ಸ್ವಲ್ಪ ಬೆಳೆದ ಬೆಳೆಯನ್ನು ಮಾರುಕಟ್ಟೆಗೆ ತೆಗೆದುಕೊಂಡು ಹೋದಾಗ ದಲ್ಲಾಳಿಗಳ ದಬ್ಬಾಳಿಕೆಯಿಂದ ರೈತರ ಬೆಳೆಗೆ ಕಾಸಿನ ಬೆಲೆ ಇಲ್ಲದೇ ವಿದ್ಯುತ್ ಬಿಲ್ಲು ಕಟ್ಟಲು ಪರದಾಡುವ ಸ್ಥಿತಿ ಅನುಭವಿಸುತ್ತಿರುವುದನ್ನು ಕಾಣಬಹುದು. ಇಂತಹ ಕ್ಲಿಷ್ಟ ಪರಿಸ್ಥಿತಿಗೆ ಸಿಲುಕಿ ರೈತ ಸಾಲದ ಬಾಧೆ ತಾಳದೇ ಬದುಕು ಹೊರೆಯಾಗಿ ಆತ್ಮಹತ್ಯೆಯಂತಹ ದುರಂತಕ್ಕೆ ಶರಣಾಗುವ ಸ್ಥಿತಿಯನ್ನು ನಿವಾರಿಸಿಕೊಳ್ಳಲು ಇರುವ ಭೂಮಿಯನ್ನು ಮಾರಾಟ ಮಾಡಲು ನಿರ್ಧರಿಸಿದರೆ, ಸರಕಾರವು ದೇವದುರ್ಗದ ಯಾವ ಕ್ಷೇತ್ರದಲ್ಲಿಯೂ ಭೂಮಿಯನ್ನು ಮಾರಾಟ ಮಾಡದಂತೆ ಆದೇಶ ನೀಡಿ ಇನ್ನಷ್ಟು ಕಂಗಲಾಗುವ ಸ್ಥಿತಿ ನಿರ್ಮಿಸಿರುವುದು ಗಮನಾರ್ಹ.[೧೫] ರೈತರು ನಗರ ಪ್ರದೇಶಕ್ಕೆ ವಲಸೆ ಹೋಗಿರುವುದು ಪ್ರತಿಶತ ೮೦ರ ಪ್ರಮಾಣ ಮೀರಬಹುದು. ಕೃಷಿ ಕೂಲಿಕಾರರಾಗಿ ಜೀವನ ನಡೆಸುವ ಅನಿವಾರ್ಯತೆಯು ಈ ಗ್ರಾಮಗಳಲ್ಲಿ ಕಂಡುಬರುವುದು ಸರ್ವೇಸಾಮಾನ್ಯ. ನದಿ ಪ್ರವಾಹದಿಂದ ಮುಳುಗಡೆಯಾದ ವ್ಯಾಪ್ತಿಯಲ್ಲಿ ಬರುವ ಕೊಪ್ಪರು, ಚೋಳದಡಿಗಿ, ಗೋಪಾಳಪುರ ಗ್ರಾಮಗಳು ಕೃಷ್ಣಾ ನದಿಯಿಂದಲೇ ಪಂಪ್‌ಸೆಟ್ ಮೂಲಕ ಕೃಷಿ ಪದ್ಧತಿ ಅಳವಡಿಸಿಕೊಂಡಿರುತ್ತಾರೆ. ಆದಾಗ್ಯೂ ಅವರು ಬೆಳೆದ ಬೆಳೆಗಳಿಗೆ ಸೂಕ್ತ ಬೆಲೆಸಿಗದೇ, ಅತಂತ್ರ ಸ್ಥಿತಿ ಅನುಭವಿಸುತ್ತಿರುವವರನ್ನು ಈಗಲೂ ಕಾಣಬಹುದು.

ನಿಲವಂಜಿ ಗ್ರಾಮದಲ್ಲಿ ಏತ ನೀರಾವರಿಯಿಂದ ಕೃಷಿ ಕಾರ್ಯ ಕೈಗೊಳ್ಳಲಾಗುವುದನ್ನು ಇತ್ತೀಚೆಗೆ ತಾಲ್ಲೂಕಿನಲ್ಲಿ ಕೃಷಿ ಇಲಾಖೆಗಳು ವೀಕ್ಷಿಸಲಾಗಿ ಒಣಬೇಸಾಯ ಅಭಿವೃದ್ಧಿ ಯೋಜನೆಯಡಿಯಲ್ಲಿ "ಕೃಷಿರಥ" ಪದ್ಧತಿಯನ್ನು ಅಳವಡಿಸುತ್ತದೆ. ಕಳೆದ ಹತ್ತು ವರ್ಷಗಳ ಹಿಂದೆ ಸಣ್ಣ ನೀರಾವರಿ ಇಲಾಖೆ ರೂಪಿಸಿದ ಯೋಜನಾ ಕಾರ್ಯ ಕುಂಠಿತವಾಗಿರುವುದರಿಂದ ಕರಿಗುಡ್ಡ ಗ್ರಾಮದ ವ್ಯಾಪ್ತಿಯಲ್ಲಿ ಬರುವ ನಿಲವಂಜಿ ಏತ ನೀರಾವರಿ ಯೋಜನೆ ರೈತರ ಜಮೀನಿಗೆ ನೀರುಣಿಸಲು ಸಾಧ್ಯವಾಗಲಾರದಂತಾಗಿದೆ. ಈ ಯೋಜನೆ ಪೂರ್ಣಗೊಂಡಲ್ಲಿ ನಿಲವಂಜಿ ಹಾಗೂ ಕರಿಗುಡ್ಡ ಗ್ರಾಮಗಳ ವ್ಯಾಪ್ತಿಯಲ್ಲಿ ೨೪೨.೪೦ ಹೆಕ್ಟೇರ್ ಭೂಮಿಗೆ ನೀರುಣಿಸುವ ಉದ್ದೇಶ ಹಮ್ಮಿಕೊಳ್ಳಲಾಗಿತ್ತು. ಹಾಗೂ ನಿಲವಂಜಿ ಗ್ರಾಮದ ಪಕ್ಕದಲ್ಲಿ ಕೃಷ್ಣಾನದಿ ಹಾದು ಹೋಗುವುದರಿಂದ ಈ ಪ್ರದೇಶ ಸೂಕ್ತವಾದ ಸ್ಥಳವೆಂದು ಗುರುತಿಸಲಾಗಿತ್ತು. ಆದರೆ ಸರಕಾರವು ಈ ಕಾರ್ಯದ ಬಗ್ಗೆ ವಿಳಂಬ ನೀತಿಯೊಂದಿಗೆ ಅಲಕ್ಷ್ಯ ವಹಿಸಲಾಗಿದೆ. ಎಂಬುದು ಅಲ್ಲಿನ ರೈತರ ಕೋರಿಕೆ ಮತ್ತು ತಮ್ಮ ಸೌಲಭ್ಯಕ್ಕೆ ವಂಚನೆ ಎಸಗಿದೆ. ಜನಪ್ರತಿನಿಧಿಗಳ ಧೋರಣೆಗೆ ಅಲ್ಲಿನ ರೈತರು ಕೊರಗಿ ನೀಡುವ ಹೇಳಿಕೆಯು ಮನಕರಗುವಂತಿತ್ತು.[೧೬]

ಏತನೀರಾವರಿ ಯೋಜನೆಯ ಪದ್ಧತಿಯೂ ಮುಳುಗಡೆಯಾದ ಗ್ರಾಮಗಳಲ್ಲಿ ಅಳವಡಿಸಿದ ನಿದರ್ಶನಗಳಿಲ್ಲ. ಕೃಷಿ ಇಲಾಖೆಯಿಂದ ರೈತರಿಗೆ ಉತ್ತಮ ಗೊಬ್ಬರ, ಬೀಜಗಳ ಹಂಚುವಿಕೆಯನ್ನು ಕೈಗೊಳ್ಳಲಾಗಿದ್ದಾಗ್ಯೂ ಕೆಲವೊಂದು ಗ್ರಾಮಗಳಿಗೆ ಸಂಪೂರ್ಣ ವಿತರಣೆ ಕಾರ್ಯ ನಡೆದ ಬಗ್ಗೆ, ಆಶಾದಾಯಕ ಫಲಿತಾಂಶ ಫಲಿಸದಿರುವುದನ್ನು ಕಾಣಬಹುದಾಗಿದೆ. ಈ ದಿಶೆಯಲ್ಲಿ ಬರಗಾಲದಿಂದ ಬಳಲುವ ಗ್ರಾಮಗಳಿಗೆ ಸರಕಾರವು ಹೆಚ್ಚಿನ ನೆರವಿನ ಸಹಾಯಹಸ್ತ ನೀಡುವುದು ಅವಶ್ಯವೆನಿಸುತ್ತದೆ. ಕೃಷಿಯನ್ನೇ ನಂಬಿದ ತಾಲ್ಲೂಕಿನ ರೈತರು ಕೃಷ್ಣಾ ನದಿಯ ಪ್ರವಾಹದಿಂದ ತಾಲ್ಲೂಕಿನಲ್ಲಿ ಹೋಬಳಿ ಅನ್ವಯ ಹಾನಿಯಾದ ವಿವರ ದಾಖಲೆಗಳ ಪ್ರಕಾರ ಇರುವ ವಾಸ್ತವಿಕತೆಯನ್ನು ಕೋಷ್ಟಕ ೨ ಮತ್ತು ೩ರಲ್ಲಿ ಗಮನಿಸಬಹುದಾಗಿದೆ. ೨೦೦೫ನೇ ಸಾಲಿನಲ್ಲಿ ಅಲ್ಪ ಪ್ರಮಾಣದ ಪರಿಹಾರದ ಮೊತ್ತ ಪ್ರವಾಹ ಪೀಡಿತರಿಗೆ ದೊರಕಿದೆ. ೨೦೦೬ನೇ ಸಾಲಿನಲ್ಲಿ ಪರಿಹಾರದ ಮೊತ್ತ ಈವರೆಗೂ ಪೂರ್ಣ ಪ್ರಮಾಣದಲ್ಲಿ ವಿತರಿಸಿಲ್ಲವೆಂದು ರೈತರ ಅಳಲಾಗಿದೆ.

## ಕೋಷ್ಟಕ ೨

### ೨೦೦೫ರಲ್ಲಿ ಕೃಷ್ಣಾನದಿ ಪ್ರವಾಹದಿಂದ ಆದ ಹಾನಿ

| ಹೋಬಳಿ | ಒಟ್ಟು ಗ್ರಾಮಗಳು ಸಂಖ್ಯೆ | ಒಟ್ಟು ಫಲಾನುಭವಿಗಳ | ಹಾನಿಯಾದ ಭೂಮಿಯ ವಿಸ್ತೀರ್ಣ | | ಪರಿಹಾರ ನೀಡಬೇಕಾದ ಮೊತ್ತ | | ಒಟ್ಟು ಪರಿಹಾರ ಮೊತ್ತ |
|---|---|---|---|---|---|---|---|
| | | | ಖುಷ್ಕಿ | ನೀರಾವರಿ | ಖುಷ್ಕಿ | ನೀರಾವರಿ | |
| ಗಬ್ಬೂರು | ೮ | ೩೪೬ | ೪೫.೫೩೫ | ೨೩.೭೯೦ | ೯೧೦.೧೬೦ | ೧೧೮೯.೫೦೦ | ೨೧,೦೦೧.೬೦ |
| ಜಾಲಹಳ್ಳಿ | ೯ | ೫೧೪ | ೪೮.೮೮೫ | ೧.೪೭೫ | ೯೭೭.೭೦೦ | ೭೩.೭೫೦ | ೧೦,೫೧೪.೫೦ |
| ದೇವದುರ್ಗ | ೧೭ | ೧೩೧೨ | ೧೦೩.೬೦೭ | ೮೩.೬೧೩ | ೨೦೭೨.೧೪೦ | ೧೬೫೦.೬೫೦ | ೩೭,೫೨೭.೯೦ |
| ಒಟ್ಟು | ೩೪ | ೨೧೭೨ | ೧೯೮.೦೨೫ | ೧೦೮.೮೭೮ | ೩೯೬೦.೫೦೦ | ೨೯೪.೩೯೦ | ೬೯,೦೪೪.೦೦ |

## ಕೋಷ್ಟಕ ೩

### ೨೦೦೬ರಲ್ಲಿ ಕೃಷ್ಣಾನದಿ ಪ್ರವಾಹದಿಂದ ಆದ ಹಾನಿ

| ಹೋಬಳಿ | ಒಟ್ಟು ಗ್ರಾಮಗಳು ಸಂಖ್ಯೆ | ಒಟ್ಟು ಫಲಾನುಭವಿಗಳ | ಹಾನಿಯಾದ ಭೂಮಿಯ ವಿಸ್ತೀರ್ಣ | | ಪರಿಹಾರ ನೀಡಬೇಕಾದ ಮೊತ್ತ | | ಒಟ್ಟು ಪರಿಹಾರ ಮೊತ್ತ |
|---|---|---|---|---|---|---|---|
| | | | ಖುಷ್ಕಿ | ನೀರಾವರಿ | ಖುಷ್ಕಿ | ನೀರಾವರಿ | |
| ಗಬ್ಬೂರು | ೭ | ೮೫ | ೪.೭೬೧ | ೨೫.೭೧೨ | ೯೫.೨೨೦ | ೧೦೮.೯೫೦ | ೨.೦೪೧.೭೦ |
| ಜಾಲಹಳ್ಳಿ | ೯ | ೩೧೭ | ೨೨.೦೫೯ | ೪.೭೬೧ | ೪೪೨.೦೮೦ | ೯೦.೭೫೦ | ೫.೩೨೮.೩೦ |
| ದೇವದುರ್ಗ | ೧೭ | ೩೮೪ | ೨೫.೭೧೨ | ೨೨.೦೫೯ | ೫೪.೨೪೦ | ೩೫೫.೧೦೦ | ೮.೬೨೩.೪೦ |
| ಒಟ್ಟು | ೩೩ | ೭೮೬ | ೫೨.೫೩೨ | ೧೧.೦೯೬ | ೧೦೫೧.೫೪೦ | ೫೫೪.೮೦೦ | ೧೬,೦೬೩.೪೦ |

## ೨.೩ ಕೈಗಾರಿಕೆ :

"ಕೈಗಾರಿಕೀಕರಣಗೊಳಿಸಿ ಇಲ್ಲವೇ ನಾಶ ಹೊಂದಿ" ಇದು ಸರ್ ಎಂ. ವಿಶ್ವೇಶ್ವರಯ್ಯನವರ ನುಡಿಮುತ್ತು. ಪ್ರಾಯಶಃ ಇದರ ಅರ್ಥ 'ನಿರುದ್ಯೋಗವನ್ನು ತೋಲಗಿಸ' ಎಂದಾಗುತ್ತದೆ. ದೇಶವೊಂದು ಅಭಿವೃದ್ಧಿ ಹೊಂದುವಲ್ಲಿ ಕೈಗಾರಿಕೆಗಳ ಸ್ಥಾಪನೆ ಮತ್ತು ಬೆಳವಣಿಗೆಗೆ ವಿಶೇಷವಾಗಿ ಗುಡಿ ಕೈಗಾರಿಕೆಗಳಿಗೆ ಒತ್ತು ನೀಡಬೇಕು ಎಂಬುದು. ಇಲ್ಲಿ ಬಹುಮುಖ್ಯ ಸಂಗತಿ. ಭಾರತದಲ್ಲಿ ಬಹಳ ಹಿಂದಿನಿಂದಲೂ ಕೈಗಾರಿಕೆಗಳಿಗೆ ವಿಶೇಷವಾಗಿ ಗುಡಿ ಕೈಗಾರಿಕೆಗಳಿಗೆ ಒತ್ತು ನೀಡುತ್ತಾ ಬರಲಾಗಿತ್ತು. ಸ್ವಾತಂತ್ರ್ಯ ಬರುವ ವೇಳೆಗೆ ಕ್ಷಿಪ್ರ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವ ಗುರಿಯೊಂದಿಗೆ ಕೃಷಿ ಪ್ರಧಾನ ದೇಶದಲ್ಲಿ ಕೃಷಿಗೆ ಒತ್ತು ನೀಡಬೇಕೇ ಅಥವಾ ಕೈಗಾರಿಕೆಗಳಿಗೆ ಒತ್ತು ನೀಡಬೇಕೇ ಎಂಬ ಅಂಶ ತೀವ್ರವಾದ ಚರ್ಚೆಗೆ ಒಳಗಾಗಿ ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ (೧೯೫೦.೫೧ ರಿಂದ ೧೯೫೫.೫೬) ಕೃಷಿ ಕ್ಷೇತ್ರದ ಬೆಳವಣಿಗೆಗೆ ವಿಶೇಷ ಆದ್ಯತೆ ನೀಡಲಾಗಿತ್ತು.

ದ್ವಿತೀಯ ಪಂಚವಾರ್ಷಿಕ ಯೋಜನೆಯನ್ನು 'ಕೈಗಾರಿಕೆ ಯೋಜನೆ' ಎಂದು ಘೋಷಿಸಿ. ಕೈಗಾರಿಕೆಗಳ ಸ್ಥಾಪನೆ ಮತ್ತು ಅಭಿವೃದ್ಧಿಗೆ ಆದ್ಯತೆ ನೀಡಲಾಯಿತು. ಅದೇನೆ ಇದ್ದರೂ ದೇಶವು ಅಭಿವೃದ್ಧಿಯನ್ನು ಸಾಧಿಸುವಲ್ಲಿ ಕೈಗಾರಿಕಾ ಕ್ಷೇತ್ರವು ಮಹತ್ವದ ಕೊಡುಗೆಯನ್ನು ನೀಡುತ್ತದೆ ಎಂಬುದು ನಿರ್ವಿವಾದ. ಸುಮಾರು ೧೮೦೦ರ ಶತಕದಲ್ಲಿ ಕರ್ನಾಟಕದಲ್ಲಿ 'ಸಕ್ಕರೆ ಕಾರ್ಖಾನೆ ಘಟಕ'ವಿತ್ತೆಂದು ರಾಜ್ಯದ ಆರ್ಥಿಕ ಚರಿತ್ರೆಯಿಂದ ತಿಳಿದು ಬರುತ್ತದೆ. ಅಲ್ಲದೇ ೧೮೮೪ ಮತ್ತು ೧೮೮೭ರಲ್ಲಿ ಜವಳಿ ಗಿರಣಿಗಳು ಆರಂಭಗೊಳ್ಳುವುದರೊಂದಿಗೆ ಕೈಗಾರಿಕಾಭಿವೃದ್ಧಿಗೆ ಚಾಲನೆ ದೊರಕಿತು ಎಂದು ಉಲ್ಲೇಖಗಳಿಂದ ವ್ಯಕ್ತವಾಗಿರುತ್ತದೆ.[೧೭] ದೇವದುರ್ಗ ತಾಲ್ಲೂಕಿನಲ್ಲಿಯ ಕೈಗಾರಿಕೆ ಬೆಳೆದು ಬಂದ ದಾರಿ ಹಾಗೂ ವಾಸ್ತವಿಕತೆಯ ಸ್ಥಿತಿ ಬಗ್ಗೆ ಅಧ್ಯಯನದ ಅವಧಿಯಲ್ಲಿ ಅವಲೋಕಿಸಲಾದ ಮಾಹಿತಿ ದೇವದುರ್ಗ ತಾಲ್ಲುಕನ್ನು ಬರಗಾಲವೆಂಬ ಹಣೆಪಟ್ಟಿ ಕಟ್ಟಿಕೊಂಡ ತಾಲ್ಲೂಕು ಎಂದೇ ಹೆಸರಾಗಿದ್ದರೂ. ಸಹ ಕೃಷ್ಣಾ ಬಲದಂಡೆ ಯೋಜನೆ ಅನ್ವಯ ನೀರಾವರಿ ಕ್ಷೇತ್ರವಾಗಿ ಪರಿಗಣಿಸಲಾಗಿದ್ದರೂ. ಅಲ್ಲಿ ಯಾವುದೇ ತರಹದ ದೊಡ್ಡ ಪ್ರಮಾಣದ ಕೈಗಾರಿಕಾ ಘಟಕ ಸ್ಥಾಪನೆಯಾಗದಿರುವುದು ಸೋಜಿಗವೆನಿಸುತ್ತದೆ. ಈ ದಿಶೆಯಲ್ಲಿ ಕೈಗಾರಿಕೆ ಸ್ಥಾಪಿಸಲು ಉದ್ಯಮಶೀಲರ ಕೊರತೆ. ಹಾಗೂ ಜನ ಪ್ರತಿನಿಧಿಗಳು ಯಾವುದೇ ರೀತಿಯಿಂದಲೂ ಆಸಕ್ತಿ ವಹಿಸದಿರುವುದು ಇಲ್ಲಿನ ಜನರ ದುರದೃಷ್ಟವೆನ್ನಬೇಕು. ಏಕೆಂದರೆ ದೊಡ್ಡ ಪ್ರಮಾಣದ ಕೈಗಾರಿಕೆ ಘಟಕದ ಸ್ಥಾಪನೆಯ ಕನಸು ಕನಸಾಗಿಯೇ ಮುಂದುವರಿದಿರುವುದು ಖೇದಕರ ವಿಷಯ.

ಏಕೆಂದರೆ ಕೈಗಾರಿಕೆಯ ಅಭಿವೃದ್ಧಿಗಾಗಿ ತಾಲ್ಲೂಕ ಕೇಂದ್ರದಲ್ಲಿ ದೊಡ್ಡ ಪ್ರಮಾಣದ ಘಟಕ ಸ್ಥಾಪನೆಯೊಂದಿಗೆ ಕೈಗಾರಿಕೆ ಕೆಲಸಗಾರರಿಗೆ ನಿವೇಶನ ಹಂಚುವ ಉದ್ದೇಶದಿಂದ ೩೧ ಎಕರೆ ಭೂಮಿಯನ್ನು ಕೆಐಎಡಿಬಿ ನಿಗಮವು ಖರೀದಿಸಿದ್ದಾಗ್ಯೂ, ಸ್ಥಾಪನೆಗೆ ಅಡಿಗಲ್ಲು ಹಾಕುವ ಪ್ರವೃತ್ತಿ ಜನರು ಈ ಬಗ್ಗೆ ಆಕ್ಷೇಪಿಸಿ, ಭೂಮಿಯ ಪ್ರಕರಣವು ಕೋರ್ಟ್‌ನಲ್ಲಿ ೧೦ ವರ್ಷಗಳಿಂದಲೂ ನಡೆದುಬಂದ ವಿವರವನ್ನು ತಾಲ್ಲೂಕು ಕೈಗಾರಿಕೆಯ ವಿಸ್ತೀರ್ಣಾಧಿಕಾರಿಗಳು ಸಮೀಕ್ಷೆ ಸಮಯದಲ್ಲಿ ಕೈಗಾರಿಕೆ ಸ್ಥಾಪನೆಗೆ ಆಗುವ ತೊಂದರೆ ಬಗ್ಗೆ ತಮ್ಮ ನಿಸ್ಸಹಾಯಕತೆಯನ್ನು ವ್ಯಕ್ತಪಡಿಸಿದರು.[೧೮] ಈ ದಿಶೆಯಲ್ಲಿ ತಾಲ್ಲೂಕಿನ ಪ್ರಮುಖರು ಹಾಗೂ ಜನಪ್ರತಿನಿಧಿಗಳು, ಶಾಸಕರು ಹೆಚ್ಚಿನ ಆಸಕ್ತಿ ವಹಿಸಿ, ದೊಡ್ಡ ಪ್ರಮಾಣದ ಕೈಗಾರಿಕಾ ಘಟಕದ ಸ್ಥಾಪನೆ ಕೈಕೊಂಡಲ್ಲಿ ಮಾತ್ರ ಇಲ್ಲಿನ ನಿರುದ್ಯೋಗದ ಸಮಸ್ಯೆಯೊಂದಿಗೆ ಆರ್ಥಿಕ ಅಭಿವೃದ್ಧಿ ಹೊಂದುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

ತಾಲ್ಲೂಕಿನ ೭ ಚೌಕಿ ಸಾಕಣೆ ಕೇಂದ್ರ ಒಂದು ರಾಜರಾಜೇಶ್ವರಿ ಸಿಮೆಂಟ್ ವರ್ಕ್ಸ್, ಕಾಟನ್ ಜಿನ್ನಿಂಗ್ ಘಟಕ, ಹಿಂದುಳಿದ ಜನಾಂಗದ ಮಹಿಳೆಯರಿಗೆ ಚರಕ, ಹೊಲಿಗೆ ಯಂತ್ರ, ಕುಂಬಾರಿಕೆ, ಕಮ್ಮಾರಿಕೆ, ಚರ್ಮೋದ್ಯಮ ಹಾಗೂ ಅತಿಸಣ್ಣ ಕೈಗಾರಿಕೆಗಳನ್ನೊಳಗೊಂಡ ೫೮೯ ಘಟಕಗಳನ್ನು ಹೊಂದಿದ್ದು, ಬಹಳಷ್ಟು ಘಟಕಗಳು ಕಾರ್ಯನಿರ್ವಹಿಸದೇ ಸ್ಥಗಿತ ವಾಗಿರುವುದನ್ನು ಕಾಣಬಹುದು. ವಿಶೇಷವಾಗಿ ಕೃಷ್ಣಾನದಿಯ ಪ್ರವಾಹದಲ್ಲಿ ಮುಳುಗಡೆಯಾದ ೩೬ ಗ್ರಾಮಗಳಲ್ಲಿ ೨೫೮ ಅತಿಸಣ್ಣ ಕೈಗಾರಿಕೆ ಘಟಕಗಳು ಇರುತ್ತವೆ. (ಕೋಷ್ಟಕ ೪ನ್ನು ನೋಡಿ.)

ಮೇಲೆ ಉಲ್ಲೇಖಿಸಲಾದ ಗ್ರಾಮಗಳಲ್ಲಿ ಕೆಲವೊಂದು ಅತಿಸಣ್ಣ ಕೈಗಾರಿಕೆ ಘಟಕಗಳು ಕಾರ್ಯ ನಿರ್ವಹಿಸುತ್ತಿವೆ. ಮುಳುಗಡೆ ವ್ಯಾಪ್ತಿಯಲ್ಲಿ ಬರುವ ಮುದುಗೋಟ ಗ್ರಾಮದಲ್ಲಿ ಒಂದು ಎರೆಹುಳು ಸಾಕಾಣಿಕ ಕೇಂದ್ರವಿದೆ. ಬ್ಯಾಂಕಿನಿಂದ ೧೦ ಲಕ್ಷ ರೂಪಾಯಿ ಸಾಲ ಪಡೆದು, ೩೦ ಸಾವಿರ ರೂಪಾಯಿ ಸರಕಾರದಿಂದ ಸಹಾಯಧನ ಪಡೆದ ಬಗ್ಗೆ ಸದ್ಯ ಸಾಕಾಣಿಕೆ ಕೇಂದ್ರದ ಕಾರ್ಯ ನಡೆಯುತ್ತಿರುವುದನ್ನು ಉಸ್ತುವಾರಿ ನೋಡಿಕೊಳ್ಳುತ್ತಿರುವ ಅಮರೇಶ ಮತ್ತು ವಿರುಪಾಕ್ಷಪ್ಪನವರು ವಿವರಿಸಿರುವುದು ಕಂಡುಬರುತ್ತದೆ.

ಅತಿಸಣ್ಣ ಕೈಗಾರಿಕೆ ವ್ಯಾಪ್ತಿಯಲ್ಲಿ ಬರುವ ಬಡಿಗತನದ ಕಾರ್ಯ ಮಾಡುತ್ತಿರುವ ಕರ್ಕಿಹಳ್ಳಿ ಗ್ರಾಮದ ಪರಿಶಿಷ್ಟ ಜಾತಿಯ ಈರಣ್ಣನವರು ಕಟ್ಟಿಗೆಯಲ್ಲಿ ವಿವಿಧ ಬಗೆಯ ಅತಿ ಆಕರ್ಷಣೆ ಸಾಮಾನುಗಳನ್ನು ತಯಾರಿಸುವ ಕೆಲಸದಲ್ಲಿ ಪ್ರಸಿದ್ಧಿ ಪಡೆದಿರುವುದನ್ನು, ಅವರು ಮಾಡಿರುವ ಬಾಗಿಲುಗಳು, ಚಿತ್ರಿಸಿರುವ ಕಲೆಗಳನ್ನು ಅವಲೋಕಿಸಬಹುದಾಗಿದೆ. ಸ್ವತಃ

ಗ್ರಾಮದಲ್ಲಿ ತನ್ನ ಕಲೆಯೊಂದಿಗೆ ಜೀವನ ನಿರ್ವಹಣೆ ಸಾಗಿಸಲು ತೊಂದರೆ ಅನುಭವಿಸುತ್ತಿರುವ. ಇಂಥ ನೂರಾರು ಕುಶಲ ಕರ್ಮಿಗಳ ಪ್ರಗತಿಗೆ ಸರಕಾರ ವಿಶೇಷ್ಪ 'ಪ್ಯಾಕೇಜ್' ಮೂಲಕ ಪ್ರಗತಿಯತ್ತ ಕೊಂಡೊಯಬೇಕಾಗಿದೆ.

ಕೊಪ್ಪರ ಹಾಗೂ ಮದರಕಲ್ ಗ್ರಾಮಗಳಲ್ಲಿ ೨ ಹತ್ತಿ ಯಂತ್ರಗಳನ್ನು (ಕಾಟನ್ ಜಿನ್ನಿಂಗ್ ಘಟಕಗಳು) ಆ ಕ್ಷೇತ್ರದಲ್ಲಿ ಬೆಳೆಯುವ ಹತ್ತಿಯ ಪ್ರಮಾಣಗಳನ್ನು ಆಧರಿಸಿ ಘಟಕಗಳನ್ನು ಸ್ಥಾಪಿಸಲಾಗಿತ್ತು. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಆ ಕ್ಷೇತ್ರವು ನೀರಾವರಿ ವ್ಯಾಪ್ತಿಗೆ ಒಳಪಟ್ಟಿದ್ದಾಗ್ಯೂ ಹತ್ತಿ ಬೆಳೆಯ ಪ್ರಮಾಣದಲ್ಲಿ ಗಣನೀಯ ಪ್ರಗತಿ ಸಾಧಿಸಲು ಸಾಧ್ಯವಾಗಿಲ್ಲ. ನೀರಾವರಿ ಸೌಲಭ್ಯದಿಂದ ವಂಚಿತರಾಗಿ ಮಳೆಯನ್ನು ಆಧರಿಸಿದ ಕೃಷಿಯಲ್ಲಿ ರೈತರು ನಿರೀಕ್ಷಿಸಿದ ಬೆಳೆ ಬಾರದೇ ಆರ್ಥಿಕ ಸ್ಥಿತಿಯಿಂದ ಸಂಕಟಕ್ಕೆ ಗುರಿಯಾಗಿದ್ದ ಪ್ರಯುಕ್ತ, ಹತ್ತಿ ಹರಿಯುವ ಯಂತ್ರಗಳ ಸ್ಥಿತಿ-ಗತಿ ಅವ್ಯವಸ್ಥೆಯಲ್ಲಿರುವುದು ಕಂಡುಬಂದಿದೆ.

**ಕೋಷ್ಟಕ ೪**

| ಕ್ರ.ಸಂ | ಗ್ರಾಮದ ಹೆಸರು | ಆಹಾರ ಉತ್ಪಾದನೆ | ಜವಳಿ ಮತ್ತು ಸಿದ್ಧ ಉಡುಪು | ಬಡಗಿತನ | ಚರ್ಮ ಉದ್ಯೋಗ | ಖಾಸಗಿ ಉದ್ಯೋಗ | ರೇಷ್ಮೆ ಸಾಕಾಣಿಕೆ |
|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ |
| **ಜಾಲಹಳ್ಳಿ ಹೋಬಳಿ** | | | | | | | |
| ೧ | ವೀರ್‌ಗೋಟ | ೦೨ | ೦೫ | ೦೧ | ೦೧ | ೦೨ | ೦ |
| ೨ | ಬಂಕುಲದೊಡ್ಡಿ | ೦೩ | ೦೭ | ೦೨ | ೦೧ | ೦೨ | ೦ |
| ೩ | ಚಂಚೋಡಿ | ೦೩ | ೧೦ | ೦೩ | ೦೨ | ೦೨ | ೦ |
| ೪ | ಲಿಂಗದಹಳ್ಳಿ | ೦೧ | ೦೩ | ೦೧ | ೦೧ | ೦ | ೦ |
| ೫ | ಮುದುಗೋಟ | ೦೧ | ೦೫ | ೦೧ | ೦೧ | ೦ | ೦೧ |
| ೬ | ಚಪ್ಪಾಳಿಕಿ | ಜನವಸತಿ ಇರುವುದಿಲ್ಲ | | | | | |
| ೭ | ಬುದ್ಧಿನ್ನಿ | ಜನವಸತಿ ಇರುವುದಿಲ್ಲ | | | | | |
| ೮ | ಬಾಗೂರು | ೦೧ | ೦೫ | ೦೧ | ೦೧ | ೦ | ೦ |
| ೯ | ಹೇರುಂಡಿ | ೦೪ | ೦೫ | ೦೨ | ೦೧ | ೦೧ | ೦ |
| ೧೦ | ಯರಗುಡ್ಡ | ೦೧ | ೦೨ | ೦೧ | ೦ | ೦ | ೦ |
| ೧೧ | ಮೈದಿನಪುರ | ೦೧ | ೦೧ | ೦೧ | ೦ | ೦ | ೦ |
| **ದೇವದುರ್ಗ ಹೋಬಳಿ** | | | | | | | |
| ೧೩ | ನಿಲವಂಜಿ | ೦೧ | ೦೨ | ೦೧ | ೦೧ | ೦೧ | ೦ |
| ೧೪ | ಅಂಜಳ | ೦೧ | ೦೨ | ೦೧ | ೦೧ | ೦೧ | ೦ |
| ೧೫ | ಅಂಚಸೂಗೂರು | ೦೨ | ೦೫ | ೦೧ | ೦೧ | ೦೧ | ೦ |
| ೧೬ | ಗೋಪಾಳಪೂರ | ೦೧ | ೦೨ | ೦೧ | ೦೧ | ೦೧ | ೦ |
| ೧೭ | ವಗಡಂಬಳಿ | ೦೧ | ೦೧ | ೦೧ | ೦ | ೦ | ೦ |

| ೧೮ | ಹೂವಿನ ಹಡಗಿ | ೦೨ | ೦೨ | ೦೧ | ೦೧ | ೦೧ | ೦ |
|---|---|---|---|---|---|---|---|
| ೧೯ | ಜೋಳದ ಹಡಗಿ | ೦೧ | ೦೨ | ೦೧ | ೦೧ | ೦೧ | ೦ |
| ೨೦ | ದೊಂಡಂಬಳಿ | ೦೨ | ೦೨ | ೦೨ | ೦೨ | ೦೧ | ೦ |
| ೨೧ | ಬೆಣೆಕಲ್ | ೦೧ | ೦೩ | ೦೧ | ೦೧ | ೦೧ | ೦ |
| ೨೨ | ಕೋಣಚಪ್ಪಳಿ | ೦೨ | ೦೫ | ೦೨ | ೦೨ | ೦೧ | ೦ |
| ೨೩ | ಮೆದರಗೋಳ | ೦೧ | ೦೧ | ೦ | ೦ | ೦ | ೦ |
| ೨೪ | ಕರಿಕಳ್ಳಿ | ೦೧ | ೦೧ | ೦೧ | ೦೧ | ೦ | ೦ |
| ೨೫ | ಪರತಪುರ | ೦೧ | ೦೧ | ೦೧ | ೦೧ | ೦೧ | ೦ |
| ೨೬ | ಕೊಪ್ಪರ | ೦೨ | ೦೧ | ೦೧ | ೦೨ | ೦೧ | ೦ |
| ೨೭ | ಕುರಿಕಳ್ಳಿ | ೦೧ | ೦೧ | ೦೧ | ೦೧ | ೦೧ | ೦ |
| ೨೮ | ಯಾಟಗಲ | ೦೨ | ೦೫ | ೦೨ | ೦೧ | ೦೧ | ೦ |
| ೨೯ | ಹೇರೂರು | ೦೧ | ೦೧ | ೦೨ | ೦೧ | ೦೧ | ೦ |
| **ಗಬ್ಬೂರು ಹೋಬಳಿ** | | | | | | | |
| ೩೦ | ಇಟಗಿ | ೦೧ | ೦೧ | ೦೧ | ೦೧ | ೦೧ | ೦ |
| ೩೧ | ಗಾಗಲ್ | ೦೧ | ೦೧ | ೦೧ | ೦೧ | ೦೧ | ೦ |
| ೩೨ | ಗೂಗಲ್ | ೦೨ | ೦೫ | ೦೧ | ೦೧ | ೦೧ | ೦ |
| ೩೩ | ಚಿಕ್ಕರಾಯಕುಂಪಿ | ೦೧ | ೦೧ | ೦೧ | ೦೧ | ೦೧ | ೦ |
| ೩೪ | ಹಿರೇರಾಯಕುಂಪಿ | ೦೧ | ೦೧ | ೦೧ | ೦೧ | ೦೧ | ೦ |
| ೩೫ | ಮದರಕಲ್ಲ | ೦೨ | ೦೫ | ೦೨ | ೦೧ | ೦೧ | ೦೧ |
| ೩೬ | ಅಪ್ಪರಾಳ | ೦೧ | ೦೧ | ೦೧ | ೦೨ | ೦ | ೦ |
| ೩೭ | ಬಸವಂತಪುರ | ೦೧ | ೦೧ | ೦೧ | ೦ | ೦ | ೦ |
| | **ಒಟ್ಟು** | **೫೦** | **೧೦೭** | **೪೩** | **೩೩** | **೨೭** | **೦೩** |

**ಆಧಾರ. ಸರಕಾರದ ದಾಖಲೆಗಳನ್ನು ಆಧರಿಸಿ**

ದೇವದುರ್ಗವು ಕೈಗಾರಿಕೆಯಲ್ಲಿ ಪ್ರಗತಿ ಸಾಧಿಸಬೇಕಾದರೆ, ಕೃಷಿ ಸಂಪತ್ತು, ಪಶುಸಂಪತ್ತು, ಖನಿಜ ಹಾಗೂ ಮಾನವ ಸಂಪನ್ಮೂಲಗಳ ಆಧಾರಿತ ಕೈಗಾರಿಕೆಗಳನ್ನು ಸ್ಥಾಪಿಸಲು, ಉದ್ಯಮಶೀಲರಿಗೆ ಉಪಯುಕ್ತವಾದ ಮಾರ್ಗದರ್ಶನದ ಅವಶ್ಯಕತೆ ಇದೆ. ಜಿಲ್ಲಾ ಕೈಗಾರಿಕಾ ಕೇಂದ್ರ ಹಾಗೂ ಕೈಗಾರಿಕಾ ಅಭಿವೃದ್ಧಿ ಇಲಾಖೆಗಳು ನಿಗಮ ಮಂಡಳಿಗಳು ಹೊಸ ಉದ್ಯಮಶೀಲರನ್ನು ಗುರುತಿಸಿ ಅವರಿಗೆ ಪ್ರೋತ್ಸಾಹಿಸಿ ಮಾರ್ಗದರ್ಶನ ನೀಡುವುದರೊಂದಿಗೆ ಮಾರಾಟ ಮಾಡಲು ಕೇಂದ್ರಗಳನ್ನು ತೆಗೆದು ಸೂಕ್ತ ಸೌಲಭ್ಯ ಸಹಕಾರ ಒದಗಿಸಿದಲ್ಲಿ ಈ ಗ್ರಾಮಗಳ ಆರ್ಥಿಕ ಅಭಿವೃದ್ಧಿ, ರೈತರ ಹಿತದೃಷ್ಟಿ ಕಾಪಾಡುವ ಮನೋಭಾವ ಜನರಿಗೆ ಸಹಕಾರಿಯಾಗಬಹುದೆಂದು ನಿರೀಕ್ಷಿಸಲಾಗಿದೆ.[೧೯]

ತಾಲ್ಲೂಕಿನಲ್ಲಿ ಕುಂಬಾರಿಕೆ, ಕಮ್ಮಾರಿಕೆ, ಬಡಗಿತನ, ಸಿದ್ಧ ಉಡುಪುಗಳ ತಯಾರಿಕೆ ಕಾರ್ಯ ಮಂದಗತಿಯಿಂದ ನಡೆಯುತ್ತಿದ್ದು, ಜೀವನ ಉಪಯೋಗಕ್ಕೆ ಅಲ್ಪ ಪ್ರಮಾಣದ ಆದಾಯದೊಂದಿಗೆ ತಮ್ಮ ಜೀವನ ಸಾಗಿಸುತ್ತಿರುವುದಾಗಿ ತಮ್ಮ ನಿಸ್ಸಹಾಯಕತೆಯನ್ನು

ನಿವೇದಿಸಿಕೊಂಡರು.[೨೦] ಇಲ್ಲಿನ ಕೈಗಾರಿಕೆ ಬೆಳವಣಿಗೆಯಾಗಬೇಕಾದರೆ ಸರಕಾರದ ಆದ್ಯ ಗಮನದ ಅವಶ್ಯಕತೆ ಇದೆ ಅಂದರೆ ಆರ್ಥಿಕ ಧನಸಹಾಯ ತುರ್ತಾಗಿ ಗುರುತಿಸುವುದು ಸಮಂಜಸವೆನಿಸುತ್ತದೆ.

ತಾಲ್ಲೂಕಿನಲ್ಲಿ ಅತಿಸಣ್ಣ ಹಾಗೂ ಗುಡಿಗಾರಿಕೆ ಕಾರ್ಯ ನಿರ್ವಹಿಸುವ ಸಿಬ್ಬಂದಿಗಳ ಸಂಖ್ಯೆಯನ್ನು ಈ ಕೆಳಗಿನಂತೆ ಗುರುತಿಸಲಾಯಿತು.

**ಅತಿಸಣ್ಣ ಕೈಗಾರಿಕ ಸಮೀಕ್ಷಾ ವರದಿ**

**ಕೊಷ್ಟಕ ೫**

| ಕ್ರ.ಸಂ. | ಉದ್ಯೋಗ | ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ |
|---|---|---|
| ೦೧ | ಬಡಗಿತನ | ೩೧೫ |
| ೦೨ | ಆಭರಣ ತಯಾರಿಸುವುದು | ೨೧೦ |
| ೦೩. | ಕುಂಬಾರಿಕೆ | ೨೦೦ |
| ೦೪. | ಟೈಲರಿಂಗ್ | ೮೦೦ |
| ೦೫. | ಬೊಂಬೆ ತಯಾರಿಸುವವರು | ೧೫೮ |
| ೦೬. | ನೇಕಾರರು | ೨೦೦ |
| ೦೭. | ರಾಜಸ್ಥಾನ ಮಾದರಿ ಉಡುಪು ತಯಾರಿಸುವವರು | ೨,೦೦೦ |
| ೦೮. | ಕಲ್ಲು ಹೊಡೆಯುವವರು | ೬೦೦ |
| ೦೯. | ಗೊಡೆ ಕಟ್ಟುವವರು | ೮೦೦ |
| ೧೦. | ಅಗಸರು | ೨೦೦ |
| ೧೧. | ಕ್ಷೌರಿಕರು | ೨೦೦ |

ತಾಲ್ಲೂಕಿನಲ್ಲಿ ಆರ್ಥಿಕವಾಗಿ ಪ್ರಗತಿಯೊಂದಲು ಅಕ್ಕಿಗಿರಣಿ ಸ್ಥಾಪನೆ, ಸ್ಥಗಿತಗೊಂಡ ಕಾಟನ್ ಜಿನ್ನಿಂಗಗಳು ಕಾರ್ಯ ಪುನಃ ಆರಂಭಿಸಲು ಧನಸಹಾಯದ ಅವಶ್ಯಕತೆ ಇದೆ. ಅತಿಸಣ್ಣ ಕೈಗಾರಿಕೆಗಳ ಏಳಿಗೆಗೆ ಸಂಪನ್ಮೂಲಗಳ ಪೂರೈಕೆಯೂ ಅತಿ ಮಹತ್ವದ ಪಾತ್ರ ವಹಿಸಬಹುದಾಗಿದೆ. ತಾಲ್ಲೂಕಿನಲ್ಲಿ ಕೈಗಾರಿಕೆ ಅಭಿವೃದ್ಧಿ ಬಲಪಡಿಸಲು ಈ ಕೆಳಗೆ ಕಾಣಿಸಿದ ಗ್ರಾಮಗಳಲ್ಲಿ ಎಸ್.ಸಿ.ಜಿ, ಟಿ.ಎಸ್.ಪಿ.ಗಳ ತರಬೇತಿ ನೀಡಿರುವುದನ್ನು ಕೈಗಾರಿಕೆ ವಿಸ್ತೀರ್ಣಾಧಿಕಾರಿಗಳ ಕಾರ್ಯಾಲಯಕ್ಕೆ ಸಂದರ್ಶಿಸಿದಾಗ ಈ ವಿಷಯ ಕಂಡುಬಂದಿರುತ್ತದೆ.

## ೨೦೦೫-೦೬ನೇ ಸಾಲಿನಲ್ಲಿ

| ಕ್ರ.ಸಂ. | ಗ್ರಾಮದ ಹೆಸರು | ತರಬೇತಿಗಳು ನಡೆದ ಸಂಖ್ಯೆ | ತರಬೇತಿಗೆ ಹಾಜರಾದ ಅಭ್ಯರ್ಥಿಗಳ ಸಂಖ್ಯೆ |
|---|---|---|---|
| ೦೧. | ಗೂಗಲ್ | ೦೫ | ೪೦ |
| ೦೨. | ಮಸರಕಲ್ | ೧೦ | ೩೦ |
| ೦೩. | ಗಾಣದಾಳ | ೦೬ | ೪೯ |
| ೦೪. | ಕೊಪ್ಪರ | ೦೮ | ೫೩ |
| ೦೫. | ಕೋಣಚಪ್ಪಳಿ | ೦೮ | ೩೦ |
| ೦೬. | ಖಾನಾಪುರ. | ೦೯ | ೨೫ |

ಕೈಗಾರಿಕೆಗಳ ಅಭಿವೃದ್ಧಿಯೊಂದಿಗೆ ಆರ್ಥಿಕವಾಗಿ ಪ್ರಗತಿ ಸಾಧಿಸಲೂ, ಗ್ರಾಮಗಳ ಕಸಬುದಾರರು ಈ ಕೆಳಕಂಡ ಕಾರ್ಯಕ್ರಮಗಳನ್ನು ಅಳವಡಿಸಿಕೊಳ್ಳಬಹುದು.

೧. ಗ್ರಾಮದಲ್ಲಿ ಲಭ್ಯವಿರುವ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ವೈವಿಧ್ಯಮಯವಾದ ಗೃಹ ಕೈಗಾರಿಕೆಗಳನ್ನು ತೆರೆಯುವಂತೆ ಪ್ರೇರೇಪಿಸುವುದು.

೨. ಗ್ರಾಮಗಳ ಕಾರ್ಯಕ್ಷೇತ್ರದಲ್ಲಿ ಲಭ್ಯವಿರುವ ನೀರಾವರಿ ಸೌಕರ್ಯಗಳನ್ನು ಬಳಸಿಕೊಂಡು ವರ್ಷದಲ್ಲಿ ಎರಡು ಮೂರು ಬೆಳೆಗಳನ್ನು ತೆಗೆಯುವಂತೆ ಪ್ರೇರಣೆ ನೀಡುವುದು.

೩. ಗ್ರಾಮಸ್ಥರು ಉತ್ಪಾದಿಸಿದ ಕಾಯಿಪಲ್ಲೆ, ದವಸ-ಧಾನ್ಯ ಮತ್ತು ಕೈಗಾರಿಕಾ ವಸ್ತುಗಳನ್ನು ನಿಯಂತ್ರಿತ ಮಾರುಕಟ್ಟೆಯಲ್ಲಿ ಹೇಗೆ ಮಾರಾಟ ಮಾಡಿ ಆರ್ಥಿಕ ವರಮಾನವನ್ನು ಹೇಗೆ ಗಳಿಸಿಕೊಳ್ಳಬಹುದೆಂಬುದನ್ನು ಮನದಟ್ಟು ಮಾಡಿಕೊಡಬೇಕು.[೨೧]

೪. ರೇಷ್ಮೆ ಕೈಗಾರಿಕೆ, ಬಡಿಗತನ, ಕುಂಬಾರಿಕೆ ಇನ್ನಿತರ ಉಪಯುಕ್ತ ಕಸಬುಗಳನ್ನು ಕೈಗೊಳ್ಳುವಂತೆ ಪ್ರೇರೇಪಿಸುವುದು.

**ಅಡಿಟಿಪ್ಪಣಿಗಳು :**

೧. ಡಾ. ಎಸ್.ಚಿನ್ನಸ್ವಾಮಿ ಸೋಸಲೆ, **ನಮ್ಮ ಗ್ರಾಮಗಳು ಅಂದು ಇಂದು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪುಟ ೧೬ – ೧೮.

೨. ರಾಯಚೂರು ಜಿಲ್ಲಾ ಜನಗಣತಿ, ೨೦೦೧, ಪುಟ – ೦೫

೩. ಬಿ.ಟಿ.ಲಲಿತಾನಾಯಕ್, **ದೇವದುರ್ಗ ತಾಲ್ಲೂಕು ದರ್ಶನ**, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೮೬, ಪುಟ-೧

೪. ಪ್ರಜಾವಾಣಿ, ೨೮.೦೯.೨೦೦೫, ಪುಟ-೨

೫. ಸಂದರ್ಶನ ಆಧಾರಿತ ಮಾಹಿತಿ

೬. ಪ್ರಜಾವಾಣಿ, ೦೮.೦೭.೨೦೦೬, ಪುಟ ೩

೭. ರಾಯಚೂರು ವಾಣಿ, ೦೩.೦೮.೨೦೦೬, ಪುಟ ೧

೮. ವಿಜಯ ಕರ್ನಾಟಕ, ೦೩.೦೮.೨೦೦೬, ಪುಟ ೧

೯. ಅದೇ, ೨೫.೦೮.೨೦೦೬, ಪುಟ-೩

೧೦. ರಾಯಚೂರು ವಾಣಿ, ೨೫.೦೮.೨೦೦೬, ಪುಟ ೧

೧೧. ಕಂದಾಯ ಇಲಾಖೆ, ಸಹಾಯಕ ಆಯುಕ್ತರ ಕಾರ್ಯಾಲಯ, ರಾಯಚೂರು, ಆ.ಸಂ. ಕಂ.ಭೂ.ಸ್ವಾ ಸಾಮಾನ್ಯ, ದಿ.೦೨.೦೨.೨೦೦೭.

೧೨. ಡಾ. ಹೆಚ್.ಚಂದ್ರಶೇಖರ್, **ಸಿರಿದುರ್ಗ**, ದೇವದುರ್ಗ ತಾಲ್ಲೂಕು, ಕನ್ನಡ ಸಾಹಿತ್ಯ ಪರಿಷತ್ತು, ೨೦೦೩, ಪುಟ ೧೧೨

೧೩. ನಾರಾಯಣಪುರ ಬಲದಂಡೆ ಕಾಲುವೆ ಸಂಕ್ಷಿಪ್ತ ವಿವರಣೆ, ವರದಿ ಡಿಸೆಂಬರ್, ೧೯೯೫, ಪುಟ-೧-೨-೩.

೧೪. ಕರ್ನಾಟಕ ರಾಜ್ಯಪತ್ರ ಇಲಾಖೆ, ಗುರುವಾರ, ಜನವರಿ ೪, ೨೦೦೭.

೧೫. ಸಂಯುಕ್ತ ಕರ್ನಾಟಕ, ೦೧.೦೮.೨೦೦೫, ಪುಟ ೭

೧೬. ೧ನೇ ಮೇ, ೨೦೦೭, ಪ್ರಜಾವಾಣಿ, ಪುಟ- ೧

೧೭. ಭವಿಷ್ಯದ ಸುವರ್ಣ, **ಕರ್ನಾಟಕ ರಾಷ್ಟ್ರೀಯ ವಿಚಾರ ಸಂಕಿರಣ**, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭, ಪುಟ-೧

೧೮. ಕೈಗಾರಿಕೆ ಇಲಾಖೆ, ಸರ್ಕಾರದ ಪತ್ರಗಳು, ಪುಟ-೧

೧೯. ಡಾ. ದೇವೇಂದ್ರಕುಮಾರ್ ಹಕಾರಿ, ಡಾ. ಕೆ.ಆರ್.ಸಂಧ್ಯಾರೆಡ್ಡಿ, **ಗ್ರಾಮೀಣ ವೃತ್ತಿಗಳು**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦, ಪುಟ-೨೦-೨೧

೨೦. ಡಾ. ಕೃಷ್ಣಕೊತಾಯ, **ಗ್ರಾಮೀಣಾಭಿವೃದ್ಧಿ ಕೆಲವು ಚಿಂತನೆಗಳು**, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೧೯೯೮, ಪುಟ- ೬

೨೧. ದೇವದುರ್ಗ ತಾಲ್ಲೂಕಿನ, **ಕೈಗಾರಿಕೆ ಸಮೀಕ್ಷಾಣಾ ವರದಿ**, ಪ್ರಕಟಣೆ, ಜಿಲ್ಲಾ ಕೈಗಾರಿಕಾ ರಾಯಚೂರು, ೨೦೦೦, ಪುಟ-೨೫

# ಅಧ್ಯಾಯ ಮೂರು

## ಪ್ರವಾಹ, ಸರಕಾರ ಹಾಗೂ ಜನತೆ

# ಅಧ್ಯಾಯ ಮೂರು

## ಪ್ರವಾಹ, ಸರಕಾರ ಹಾಗೂ ಜನತೆ

### ೩.೧ ಪ್ರವಾಹ :

ನಿಸರ್ಗವೇ ಜಗತ್ತಿನಲ್ಲಿ ಬಹುದೊಡ್ಡ ಗುರು ಎಂಬುದು ರವೀಂದ್ರನಾಥ ಟ್ಯಾಗೂರರ ಮಾತು ಅತ್ಯಂತ ಮಹತ್ವದ್ದು. ಪ್ರಕೃತಿ ಎಷ್ಟೇ ಪ್ರಶಾಂತವಾದ ಮುಖವನ್ನು ಹೊಂದಿದರೂ ಅಷ್ಟೇ ಬೀಷಣವಾದ ಇನ್ನೊಂದು ಮುಖವನ್ನು ಪಡೆದಿರುತ್ತದೆ.[೧] ಎಲ್ಲವನ್ನು ತನ್ನ ಹಿಡಿತದ ತೆಕ್ಕೆಗೆ ತೆಗೆದುಕೊಳ್ಳಲೂ ಬಯಸುವ ಮಾನವರು ಅಹಂಕಾರ ಪ್ರವೃತ್ತಿಗೆ ನಿಲುಕದಿರುವ ಶಕ್ತಿ ಎಂದರೆ ಪ್ರಕೃತಿಯೊಂದೇ. ಭೇದಿಸಿದಷ್ಟು ರಹಸ್ಯಗಳನ್ನು ಬಚ್ಚಿಟ್ಟುಕೊಳ್ಳುವ ನಿಯಂತ್ರಣಕ್ಕೆ ನಿಲುಕದ ಪ್ರಕೃತಿ ತನ್ನ ಭೀಕರ ವಿಕೋಪದ ರುದ್ರನರ್ತನವನ್ನು ಆಗಾಗ ಮಾಡುತ್ತಿರುತ್ತದೆ. ಅಲ್ಪನಾದ ಮಾನವನನ್ನು ತಲ್ಲಣಗೊಳಿಸಿ ಹಲವಾರು ಸಾವು-ನೋವುಗಳಿಗೆ ಕಾರಣ ಆಗುವುದಲ್ಲದೇ ಅಪಾರ ಆಸ್ತಿ-ಪಾಸ್ತಿಯನ್ನು ನಾಶ ಮಾಡಿಬಿಡುತ್ತದೆ. ಮನುಷ್ಯ ಜೀವಮಾನದ ಶ್ರಮದ ಫಲವನ್ನು ಹಾಗೂ ಪರಂಪರಾಗತ ಶ್ರಮದ ಫಲಗಳನ್ನು ಕೆಲವೇ ತಾಸುಗಳಲ್ಲಿ ನುಂಗಿ ಹಾಕಿ ಬಿಡುತ್ತದೆ. ಅದರ ಕಲ್ಪನೆಯೇ ಮನುಷ್ಯನಿಗೆ ಭಯವನ್ನುಂಟು ಮಾಡುತ್ತದೆ.

ಇನ್ನೂ ಇದರಿಂದ ನಿಜವಾಗಿಯೂ ಹಾನಿಗೊಳಗಾದವರಿಗೆ ಉಂಟಾಗಬಹುದಾದ ಪರಿಸ್ಥಿತಿಯನ್ನು ನೆನೆದರೆ ಎಂಥವರ ಮನದಲ್ಲೂ ಇಂತಹ ಸಮಸ್ಯೆಗಳನ್ನು ನಾವೇಕೆ ತೀವ್ರವಾಗಿ ಪರಿಗಣಿಸುತ್ತಿಲ್ಲ. ಸಮಸ್ಯೆ ಬಂದಾಗ ಅದಕ್ಕೆ ನೆರವಿನ ನಾಟಕವನ್ನಾಡಿ ಮತ್ತೆ ನಿಶ್ಯಬ್ಧವಾಗುತ್ತಿರುವ ಆಡಳಿತ ಯಂತ್ರ ಎಲ್ಲೋ ತನ್ನನ್ನು ಸಮಸ್ಯೆಯಿಂದ ಜಾರಿಕೊಳ್ಳುತ್ತದೆ ಎನಿಸುತ್ತದೆ.

ದೇಶದಲ್ಲಿರುವ ಉನ್ನತ ತಂತ್ರಜ್ಞಾನವನ್ನೂ ಮಾನವನ ಮೂಲಭೂತ ಅವಶ್ಯಕತೆಗೆ ತೊಡಗಿಸಬೇಕಾದ ಅವಶ್ಯಕತೆ ಹಿಂದೆಂದಿಗಿಂತಲೂ ಇಂದು ಹೆಚ್ಚಾಗಿದೆ. ನೆರೆಹಾವಳಿಯ ತೀವ್ರತೆಯನ್ನು ಕಡಿಮೆ ಮಾಡುವ ಮುನ್ನೆಚ್ಚರಿಕೆ ಕ್ರಮಗಳ ಕಡೆಗೆ ಗಮನ ಹರಿಸಬೇಕಾಗಿದೆ. ಪ್ರವಾಹ ಪೀಡಿತ ಪ್ರದೇಶಗಳನ್ನು ಗುರುತಿಸುವುದರ ಮೂಲಕ, ಸಣ್ಣಸಣ್ಣ ಅಣೆಕಟ್ಟುಗಳ

ನಿರ್ಮಾಣಕ್ಕೆ ಹೆಚ್ಚು ಒತ್ತನ್ನು ನೀಡುವುದರ ಮೂಲಕ ಜನರ ನೆಮ್ಮದಿಯನ್ನು ಕಾಪಾಡಬೇಕಾಗಿದೆ.

ಕರ್ನಾಟಕದ ಸಾವಿರಾರು ಹೆಕ್ಟೇರ್ ಪ್ರದೇಶಕ್ಕೆ ನೀರನ್ನು ಒದಗಿಸಿ ಉತ್ತರ ಕರ್ನಾಟಕದ ಜೀವಸೆಲೆಯಾಗಿರುವ ನಾರಾಯಣಪುರ ಅಣೆಕಟ್ಟೆ ಹಿನ್ನೀರಿನಿಂದ ಮುಳುಗಡೆಯಾದ ಹಲವಾರು ಗ್ರಾಮಗಳು ಸಮಸ್ಯೆಗಳನ್ನು ಎದುರಿಸುತ್ತಿವೆ. ಈ ದಿಶೆಯಲ್ಲಿ ಕೃಷ್ಣಾನದಿಯ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ-ಆರ್ಥಿಕ ವಿಷಯದ ಬಗೆಗಿನ ಒಳನೋಟದ ಚಿತ್ರಣವ ವಿಶ್ಲೇಷಣೆಯಿಂದ ಅವಲೋಕಿಸಬಹುದಾಗಿದೆ.

ಕೃಷ್ಣಾನದಿ ಮಹಾರಾಷ್ಟ್ರದ ಸಹ್ಯಾದ್ರಿ ಪರ್ವತಗಳ ತಪ್ಪಲಿನಲ್ಲಿರುವ ಮಹಾಬಲೇಶ್ವರದಲ್ಲಿ ಹುಟ್ಟಿ, ಆಗ್ನೇಯಕ್ಕೆ ಹರಿಯುತ್ತಾ, ಕರ್ನಾಟಕದಲ್ಲಿ ಪೂರ್ವಾಭಿಮುಖವಾಗಿ ಹರಿಯುತ್ತದೆ. ಆದರೆ ಸತತ ಮಳೆಯ ಪ್ರಭಾವದಿಂದ ಕೊಯ್ನಾ ಅಣೆಕಟ್ಟಿನಲ್ಲಿನ ನೀರಿನ ಪ್ರಮಾಣ ಅಧಿಕವಾಗಿ, ಹೆಚ್ಚುವರಿ ನೀರನ್ನು ಕೃಷ್ಣಾನದಿಗೆ ಬಿಡುವುದರಿಂದಾಗಿ ಕರ್ನಾಟಕದ ಈ ನದಿಯ ನೀರಿನ ಪ್ರಮಾಣವು ಮಿತಿಮೀರಿ ಹರಿಯುತ್ತದೆ. ಹೆಚ್ಚಾದಾಗ ಪ್ರವಾಹದ ರೂಪದಿಂದ ಇಲ್ಲಿ ಆಸ್ತಿ–ಪಾಸ್ತಿ ಹಾಗೂ ಜನರು ಸಾವು–ನೋವುಗಳಿಗೆ ಬಲಿಯಾಗಿರುವ ದಾರುಣ ಘಟನೆ ಎದುರಿಸುತ್ತಿರುವುದು ಕರ್ನಾಟಕದ ಜನತೆಗೆ ಸರ್ವೇಸಾಮಾನ್ಯವಾಗಿದೆ.

೨೦೦೫-೦೬ನೆಯ ಸಾಲಿನಲ್ಲಿ ಕೊಯ್ನಾ ಅಣೆಕಟ್ಟಿನಿಂದ, ಆಲಮಟ್ಟಿ ಅಣೆಕಟ್ಟೆಗೆ ಈ ಕೆಳಗೆ ಕಾಣಿಸಿದ ಹೆಚ್ಚುವರಿ ನೀರನ್ನು ಬಿಟ್ಟಿರುವುದು ಪತ್ರಿಕೆ ಹಾಗೂ ಸರಕಾರದ ದಾಖಲೆಗಳ ಅನ್ವಯ ತಿಳಿದುಬರುತ್ತದೆ.

ಕೃಷ್ಣಾನದಿಗೆ ಕೊಯ್ನಾ, ಉಜನಿ, ಆಲಮಟ್ಟಿ, ನಾರಾಯಣಪುರ ಜಲಾಶಯಗಳಿಂದ ಹೆಚ್ಚುವರಿ ನೀರು ಬಿಟ್ಟಿರುವ ವಿವರ ಈ ರೀತಿ ಇದೆ.

| | ದಿನಾಂಕ | ಎಲ್ಲಿಂದ | ಎಷ್ಟು ಪ್ರಮಾಣ |
|---|---|---|---|
| ೧. | ಜುಲೈ ಮೂರನೆಯ ವಾರದಲ್ಲಿ | ನಾರಾಯಣಪುರ ಜಲಾಶಯ | ೩೫೪.೭೫ ಕ್ಯೂಸೆಕ್ಸ್ ನೀರು |
| ೨. | ೨.೮.೦೬ | ಆಲಮಟ್ಟಿ ಜಲಾಶಯ ಮತ್ತು ನಾರಯಣಪುರ | ೨.೬೫ ಲಕ್ಷ ಕ್ಯೂಸೆಕ್ಸ್ ನೀರು |
| ೩. | ೪.೮.೦೬ | ಆಲಮಟ್ಟಿ ಜಲಾಶಯ ಮತ್ತು ನಾರಾಯಣಪುರ | ೩.೪೧ ಲಕ್ಷ ಕ್ಯೂಸೆಕ್ಸ್ ನೀರು |
| ೪. | ೫.೮.೦೬ | ಮಹಾರಾಷ್ಟ್ರದ ಕೊಯ್ನಾ ಅಣೆಕಟ್ಟು | ೨.೦೫ ಲಕ್ಷ ಕ್ಯೂಸೆಕ್ಸ್ ನೀರು |
| ೫. | ೧೭.೮.೦೬ | ನಾರಾಯಣಪುರ ಜಲಾಶಯ | ೩.೩೦ ಲಕ್ಷ ಕ್ಯೂಸೆಕ್ಸ್ ನೀರು |

ಕೃಷ್ಣಾನದಿಗೆ ೨.೫ ಲಕ್ಷಕ್ಕೂ ಕ್ಯೂಸೆಕ್ಸ್ ಮೇಲ್ಪಟ್ಟ ನೀರು ಹರಿಬಿಟ್ಟಿರುವುದೇ ಭೀಕರ ಪ್ರವಾಹಕ್ಕೆ ಕಾರಣವಾಗಿದೆ. ದೇವದುರ್ಗ ತಾಲ್ಲೂಕಿನ ಮೆದರಗೋಳ, ಹೂವಿನಹೆಡಗಿ, ಮುದಗೋಟ, ಕೊಪ್ಪರ, ಗೂಗಲ್ ಮುಂತಾದ ಗ್ರಾಮಗಳು ರಾತ್ರಿ ವೇಳೆಯಲ್ಲಿಯೂ ತೀವ್ರ ಸಂಕಟಕ್ಕೆ ಗುರಿಯಾಗಿವೆ. ಇತಿಹಾಸ ಪ್ರಸಿದ್ಧ ಕೊಪ್ಪರ ಶ್ರೀಲಕ್ಷ್ಮೀನರಸಿಂಹ ದೇವಸ್ಥಾನ, ಗೂಗಲ್ ಪ್ರಭುದೇವರ ದೇವಸ್ಥಾನ, ಅಣೆಮಲೇಶ್ವರ ದೇವಸ್ಥಾನಗಳು ಪ್ರವಾಹ ನೀರಿನಿಂದ ಆವೃತ್ತವಾಗಿದೆ.[೨]

ಪ್ರವಾಹದ ತೀವ್ರತೆಗೆ ಕೃಷಿ ಭೂಮಿಗಳು ಸಂಪೂರ್ಣ ಜಲಾವೃತಗೊಂಡಿದ್ದವು. ಸಾರಿಗೆ ಸಂಪರ್ಕ ಸಂಪೂರ್ಣ ಅಸ್ತವ್ಯಸ್ತಗೊಂಡಿತ್ತು. ರಾಯಚೂರು, ಗುಲಬರ್ಗಾ, ಹೂವಿನಹೆಡಗಿ ಸೇತುವೆ ಸಂಪೂರ್ಣ ನೀರಿನಲ್ಲಿ ಮುಳುಗಿ ಸಂಚಾರಕ್ಕೆ ತೊಂದರೆಯಾಗಿತ್ತು. ೩೦-೪೦ ಕಿ.ಮೀ ಸುತ್ತುವರಿದು ತಿಂಥಿಣಿಬ್ರಿಜ್ ಮುಖಾಂತರ ಗುಲಬರ್ಗಾಕ್ಕೆ ಹೋಗಬೇಕಾದ ಅನಿವಾರ್ಯತೆ ಈ ಸಂದರ್ಭದಲ್ಲಿ ಉದ್ಭವಿಸುತ್ತದೆ.

ದೇವದುರ್ಗ ತಾಲ್ಲೂಕು ಕೇಂದ್ರಕ್ಕೆ ಕೃಷ್ಣಾನದಿಯಿಂದ ಕುಡಿಯುವ ನೀರಿನ ಸೌಲಭ್ಯ ಕಲ್ಪಿಸಲಾಗಿದೆ. ನೀರಿನ ಹರಿವು ಹೆಚ್ಚಾಗಿ, ಪಟ್ಟಣಕ್ಕೆ ನೀರು ಸರಬರಾಜು ಮಾಡುವ ನೀರಿನ ಟ್ಯಾಂಕ್ ನೀರಿನಲ್ಲಿ ಮುಳುಗಡೆಯಾಗಿ ಪಟ್ಟಣಕ್ಕೆ ಕುಡಿಯುವ ನೀರಿನ ಸರಬರಾಜು ಸ್ಥಗಿತಗೊಂಡು, ಕನಿಷ್ಟ ೮ ದಿನಗಳವರೆಗೆ ಬೋರ್‌ವೆಲ್‌ಗಳ ಮುಖಾಂತರ ನೀರಿನ ಸರಬರಾಜು ಕಾರ್ಯ ಕೈಗೊಂಡಿರುವ ವಿಷಯ ಪಟ್ಟಣ ಪಂಚಾಯತಿ ಕಾರ್ಯದರ್ಶಿ ಕಾರ್ಯಾಲಯದ ದಾಖಲೆಗಳು ತಿಳಿಸುತ್ತವೆ. ಪ್ರವಾಹದ ಆರ್ಭಟದಿಂದ ಬೆಳೆದ ಬೆಳೆಯೂ ನೀರಿನಲ್ಲಿ ಮುಳುಗಿ ಅಂದಾಜು ಐವತ್ತು ಸಾವಿರ ರೂಪಾಯಿಗಳು ನಷ್ಟಕ್ಕೆ ಗುರಿಯಾದ ರೈತರಿಗೆ ಸರಕಾರದಿಂದ ಅಲ್ಪಪ್ರಮಾಣದ ಸಹಾಯ ಧನಸಹಾಯವು ಸಹ ದೊರಕದಿರುವುದು ರೈತರ ದುಃಸ್ಥಿತಿಗೆ ಕಾರಣವಾಗಿದೆ.

ಕೃಷ್ಣಾನದಿಯ ಪ್ರವಾಹದಿಂದಾಗಿ ತಾಲ್ಲೂಕಿನ ಮೆದುರಗೋಳ ಗ್ರಾಮ ಸಂಪೂರ್ಣ ಜಲಾವೃತ್ತಗೊಂಡಿತ್ತು. ಗ್ರಾಮದ ೮೫ಕ್ಕೂ ಹೆಚ್ಚು ಮನೆಗಳು, ಸುಮಾರು ೪೦೦ ಜನರು ಪ್ರವಾಹದಲ್ಲಿ ಸಿಲುಕಿದ್ದರು. ಜಿಲ್ಲಾ ಆಡಳಿತವು ಪುನರ್ ವಸತಿ ನಿರ್ಮಿಸಿ ಊಟದ ವ್ಯವಸ್ಥೆಯನ್ನು ಕೈಗೊಂಡಿತ್ತು. ಅಲ್ಲದೇ ಪ್ರವಾಹದಿಂದ ಕೊಚ್ಚಿಹೋದ ರಸ್ತೆಗಳ ಪರಿಸ್ಥಿತಿ ಹೇಳತೀರದಂತಿದೆ. ತಾಲ್ಲೂಕಿನ ಉದ್ದಗಲಕ್ಕೂ ಹರಿಯುವ ಕೃಷ್ಣಾನದಿಯ ಪ್ರವಾಹದಲ್ಲಿ ಕೃಷಿ

ಭೂಮಿ, ಕೃಷಿಯ ಪಂಪ್‌ಸೆಟ್‌ಗಳು ನೀರುಪಾಲಾದವು. ಆದರೆ, ರೈತರ ಈ ರೋಧನೆಗೆ ಸರಕಾರ ಸ್ಪಂದಿಸಿದ ರೀತಿ ತೃಪ್ತಿಕರವಾಗಿಲ್ಲ.[೩]

ಪ್ರವಾಹದ ಭೀಕರತೆಯಿಂದಾಗಿ ಜನರು ಕುಡಿಯುವ ನೀರಿನ ತೊಂದರೆ ಉದ್ಭವಿಸಿತು. ಜನರು ಕಲುಷಿತ ನೀರನ್ನು ಕುಡಿದು ಮಲೇರಿಯಾ ರೋಗಕ್ಕೆ ತುತ್ತಾದರು. ರೋಗವನ್ನು ನಿಯಂತ್ರಣಕ್ಕೆ ತರುವಲ್ಲಿ ಸರಕಾರಿ ವೈದ್ಯರ ನೆರವು ಹೆಚ್ಚಿನ ಸಹಾಯ ನೀಡಿತು. ತಾಲ್ಲೂಕಿನ ೩೬ ಗ್ರಾಮಗಳಲ್ಲಿ ತಪಾಸಣೆ ಹಾಗೂ ಆರೋಗ್ಯ ಜಾಗೃತಿಗೆ ತಂಡವನ್ನು ರಚಿಸಿ, ಪ್ರವಾಹ ಪೀಡಿತ ಗ್ರಾಮಸ್ಥರಿಗೆ ಹಾಲೋಜನ್ ಗುಳಿಗೆಗಳನ್ನು ವಿತರಿಸಿದರಲ್ಲದೇ ದನಕರುಗಳಿಗೆ ಲಸಿಕೆ ಹಾಕಲಾಯಿತು.

ಪ್ರವಾಹದ ಬಗ್ಗೆ ಆದ ಅನಾಹುತ, ಕೃಷಿ ಭೂಮಿಯು ಫಸಲಿನೊಂದಿಗೆ ನೀರಿನಲ್ಲಿ ನಿಂತ ಚಿತ್ರಣವು ಪತ್ರಿಕೆಯಲ್ಲಿ ಸೆರೆಹಿಡಿದ ಛಾಯಾಚಿತ್ರದ ಫೋಟೊಗಳು ಈ ಬಗ್ಗೆ ಹೆಚ್ಚಿನ ಮಾಹಿತಿ ನೀಡುತ್ತವೆ.

**೩.೨ ಸರ್ಕಾರ :**

ಜಗತ್ತಿನಲ್ಲಿ ಅತಿವೃಷ್ಟಿ, ಭೂಕಂಪ, ಪ್ರವಾಹ, ಬರಗಾಲ ಸಂಭವಿಸಿದಾಗ ಜನತೆ ತನ್ನ ದಿನನಿತ್ಯದ ಬದುಕಿಗೆ ಪರದಾಡುತ್ತ ಅನ್ನ ನೀರು ಇಲ್ಲದೇ ಸಂಕಷ್ಟಪಡುತ್ತಿರುವುದನ್ನು ಕಾಣುತ್ತೇವೆ. ಪತ್ರಿಕೆ ಹಾಗೂ ದೃಶ್ಯ ಮಾಧ್ಯಮಗಳಿಂದ ಇಂಥ ಭೀಕರತೆಯನ್ನು ಪ್ರತ್ಯಕ್ಷವಾಗಿ ಕಾಣಬಹುದಾಗಿದೆ. ಮಹಾರಾಷ್ಟ್ರದ ದಕ್ಷಿಣ ಭಾಗದಲ್ಲಿ ಹೆಚ್ಚಿನ ಮಳೆಯಾದ ಪ್ರಯುಕ್ತ ಕೋಯ್ನಾ ಮತ್ತು ಉಜನಿ ಆಣೆಕಟ್ಟುಗಳು ಭರ್ತಿಯಾಗಿ ಹೆಚ್ಚಿನ ನೀರನ್ನು ಹೊರಬಿಟ್ಟ ನಂತರ ಕರ್ನಾಟಕದಲ್ಲಿ ಕೃಷ್ಣಾ ನದಿಯು ತನ್ನ ಹರಿವಿನ ಪ್ರದೇಶವಾದ ಬೆಳಗಾಂ, ವಿಜಾಪುರ, ಬಾಗಲಕೋಟೆ, ಗುಲಬರ್ಗಾ ಹಾಗೂ ರಾಯಚೂರು ಜಿಲ್ಲೆಯಲ್ಲಿ ಪ್ರವಾಹದ ಭೀತಿಯಿಂದ ತತ್ತರಿಸಿ ಹೋಗಿರುವುದು ಸರ್ವೇಸಾಮಾನ್ಯವಾಗಿದೆ. ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನಲ್ಲಿ ಪ್ರವಾಹದಿಂದ ಹಾನಿಯಾದ ಪ್ರಮಾಣವನ್ನು ಗುರುತಿಸಲೂ ಕೇಂದ್ರ ಆಯೋಗ ತಂಡ ತಾಲ್ಲೂಕು ಮತ್ತು ಜಿಲ್ಲಾ ತಂಡಗಳು ಪ್ರವಾಹ ಪೀಡಿತ ಗ್ರಾಮಗಳ ಸಮೀಕ್ಷೆಗಾಗಿ ಭೇಟಿ ನೀಡಿದ್ದರು. ಜಿಲ್ಲಾ ಉಸ್ತುವಾರಿ ಸಚಿವರು, ಕಂದಾಯ ಸಚಿವರು, ಜಿಲ್ಲಾಧಿಕಾರಿಗಳು, ಸಾಕಷ್ಟು ಸಲ ಪ್ರವಾಹದ ಗ್ರಾಮಗಳಿಗೆ ಭೇಟಿಕೊಟ್ಟು ಬೆಳೆಹಾನಿ, ಆಸ್ತಿ-ಪಾಸ್ತಿಯ ಹಾನಿಯ ಬಗ್ಗೆ ೫ ಕೋಟಿ ರೂಪಾಯಿಗೂ ಹೆಚ್ಚಿನ ಅಂದಾಜು ಮೊತ್ತದ ಆಯವ್ಯಯವನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಸಲ್ಲಿಸಿದರು.

ಪ್ರಕೃತಿಯನ್ನು ತನ್ನ ಮೂಗಿನ ನೇರಕ್ಕೆ ತಿದ್ದಲೂ ಯತ್ನಿಸುವ ಮನುಷ್ಯನಿಗೆ ಪ್ರಕೃತಿಯಿಂದ ಉಂಟಾಗಬಹುದಾದ ಅನಾಹುತಗಳ ನಿಯಂತ್ರಣ ಸಾಧ್ಯವಿಲ್ಲವೆಂದು ತಿಳಿದಿದ್ದಾಗ್ಯೂ ಅವರಿಂದ ತೊಂದರೆಗೆ ಸಿಲುಕಿ, ಹಾನಿಗೊಳಗಾದವರಿಗೆ ತೀವ್ರ ಪರಿಹಾರವನ್ನೊದಗಿಸಲು ಮತ್ತು ಮುನ್ನೆಚ್ಚರಿಕೆಯ ಕ್ರಮಗಳನ್ನು ತೆಗೆದುಕೊಳ್ಳುವುದರಲ್ಲಿ ಆಡಳಿತ ವ್ಯವಸ್ಥೆ ಪರಿಹರಿಸುತ್ತಿರುವ ಗಮನ ಕಡಿಮೆ ಎನಿಸುವಷ್ಟು ನಿಧಾನಗತಿಯನ್ನು ಅನುಸರಿಸುತ್ತಿರುವುದು ವಿಷಾದನೀಯ ಸಂಗತಿಯಾಗಿದೆ.

ಅಗತ್ಯವಾದ ವೇಳೆಯಲ್ಲಿ ಕೊಟ್ಟದ್ದು ಅಲ್ಪವಾದರೂ ಅಮೂಲ್ಯವಾದುದಗಿರುತ್ತದೆ. ಅದನ್ನು ಅರಿತುಕೊಂಡು ಜನತೆಗೆ ಸಾಂತ್ವನ ಮತ್ತು ನೆರವನ್ನು ನೀಡುವಲ್ಲಿ ಸರ್ಕಾರ ಮುಂದಾಗಬೇಕಾಗಿದೆ. ತಾಲ್ಲೂಕಿನ ಮುಳುಗಡೆಯಾದ ಗ್ರಾಮಗಳಿಗೆ ನೀಡಿದ ಪರಿಹಾರದ ಮೊತ್ತವು ಆನೆಗೆ ಕಾಶಿನ ಗಂಜಿ ಕೊಟ್ಟು ತೃಪ್ತಿಪಡಿಸಿದಂತಿದೆ. ಈ ದಿಶೆಯಲ್ಲಿ ತಾಲ್ಲೂಕಿಗೆ ಸರ್ಕಾರವು ನೀಡಿದ ಪರಿಹಾರದ ವಿವರವು ದಿನಾಂಕ ೩.೮.೦೬ರಂದು ಬಿಡುಗಡೆಗೊಳಿಸಿದ ಪರಿಹಾರದ ಆದೇಶ ಮತ್ತು ದಿನಾಂಕ ೨೦.೧೨.೦೬ರಂದು ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ಜರುಗಿದ ಬರ-ನೆರೆಹಾವಳಿ ಪರಿಹಾರದ ಸಭೆಯಲ್ಲಿ ಗೊತ್ತುವಳಿಗೆ ಅನುಗುಣವಾಗಿ ಹಾಗೂ ಆಯೋಗಗಳ ಶಿಫಾರಸಿನ ಆಧಾರದ ಮೇರೆಗೆ ರೈತರಿಗೆ ಅನುದಾನ ವಿತರಿಸುವ ಬಗ್ಗೆ ತಹಶೀಲ್ದಾರರ ಕಾರ್ಯಾಲಯದವರ ಸಮೀಕ್ಷೆಯ ಸಮಯದಲ್ಲಿ ಒದಗಿಸಿದ ದಾಖಲೆಗಳ ಅನ್ವಯ ಈ ರೀತಿಯ ಕಂಡುಕೊಳ್ಳಬಹುದಾಗಿದೆ.

ದೇವದುರ್ಗ ತಾಲ್ಲೂಕಿನಲ್ಲಿ ಕೃಷ್ಣಾನದಿ ಪ್ರವಾಹದಿಂದ ಬೆಳೆ ಹಾನಿಯಾದ ಬಗೆಗಿನ ಮಾಹಿತಿ ಹೋಬಳಿಗಳ ಪ್ರಕಾರ ೩೩ ಗ್ರಾಮಗಳು. ೭೮೬ ಫಲಾನುಭವಿಗಳು ೧೬,೦೬,೩೪೦.೦೦ ರೂಪಾಯಿ ಪರಿಹಾರ ಮೊತ್ತ ಪಡೆದಿರುತ್ತಾರೆ.

ಕೃಷ್ಣಾನದಿ ನೆರೆಹಾವಳಿಯಿಂದ ಜಲಾವೃತಗೊಂಡು ತಾಲ್ಲೂಕಿನಲ್ಲಿ ೨೨.೮೨೬ ಹೆಕ್ಟೇರ್ ಕ್ಷೇತ್ರವನ್ನೊಳಗೊಂಡು ೩೪ ಗ್ರಾಮಗಳು, ಇದರ ವ್ಯಾಪ್ತಿಗೆ ಒಳಪಟ್ಟು ೫.೮೭,೧೫೦=೦೦ ರೂಪಾಯಿಗಳ ಬಿತ್ತನೆ ಬೀಜಗಳು ಹಾನಿಯಾದ ಬಗ್ಗೆ ಕಂದಾಯ ಇಲಾಖೆಯ ದಾಖಲೆಗಳು ತಿಳಿಸುತ್ತವೆ.

ಕೃಷಿಯನ್ನೇ ನಂಬಿದ ತಾಲ್ಲೂಕಿನ ರೈತರು ಕೃಷ್ಣಾನದಿಯ ಪ್ರವಾಹದಿಂದ ಅನುಭವಿಸಿದ ಹಾನಿ, ಹೋಬಳಿಗಳ ಅನ್ವಯ ದಾಖಲೆ ಪ್ರಕಾರ ಇರುವ ವಾಸ್ತವಿಕತೆಯನ್ನು ಕೋಷ್ಟಕ ೬ರಲ್ಲಿ ವಿವರಿಸಲಾಗಿದೆ.

ಗ್ರಾಮವಾರು ಹಾಗೂ ಫಲಾನುಭವಿಗಳಿಗೆ ವೈಯಕ್ತಿಕವಾಗಿ ಹಣ ವಿತರಿಸಿದ ದಾಖಲೆಗಳನ್ನು ತಹಶೀಲದಾರ ಕಾರ್ಯಾಲಯ ದೇವದುರ್ಗದಲ್ಲಿ ಪಡೆದು ಝೆರಾಕ್ಸ್ ಪ್ರತಿಗಳನ್ನು ಮಾಹಿತಿಗಾಗಿ ವರದಿಯಲ್ಲಿ ಅಳವಡಿಸಲಾಗಿದೆ.[೫]

ನದಿಯ ಪ್ರವಾಹದಿಂದ ರೈತರು ಬೆಳೆದ ಬೆಳೆ ನಷ್ಟದ ಪ್ರಮಾಣವು ಕೇವಲ ಪ್ರತಿಶತ ೧೦ರಂತೆ ಪಾವತಿಸಿ. ಪ್ರತಿಶತ ೯೦%ರಷ್ಟು ಹಾನಿಗೆ ಒಳಗಾಗಿ ತಾಲ್ಲೂಕಿನ ರೈತರು ಅತೀವ ಅಧಿಕ ತೊಂದರೆಗೆ ಒಳಗಾಗಿ ಇನ್ನೂ ಸಾಲದ ಹೊರೆಯಿಂದ ಮುಕ್ತಿ ಪಡೆಯಲೂ ಹಲವಾರು ವರ್ಷಗಳ ದೀರ್ಘ ಕಷ್ಟ ಅನುಭವಿಸುವುದು ಶತಸಿದ್ಧವೆಂಬುದನ್ನು ಉಲ್ಲೇಖಿಸಲು ಖೇದವೆನಿಸುತ್ತದೆ. ಈ ದಿಶೆಯಲ್ಲಿ ಸರಕಾರವು ರೈತರ ಕಷ್ಟ ಕಾರ್ಪಣ್ಯಗಳ ನಿವಾರಣೆಗಾಗಿ ಗುರುತರವಾದ ಫಲಪ್ರದವಾದ ಯೋಜನೆ ಹಮ್ಮಿಕೊಂಡು ರೈತರಿಗೆ ನೆರವಾಗಲು ತಾಲ್ಲೂಕು ಹಾಗೂ ಜಿಲ್ಲಾ ಆಡಳಿತವು ಸೂಕ್ತ ಪ್ರಾಧಾನ್ಯತೆ ನೀಡಲೂ, ವಿಳಂಬಿಸದೇ ಕಾರ್ಯವನ್ನು ತೀವ್ರಗತಿಯಲ್ಲಿ ಜಾರಿಗೆ ತರುವುದನ್ನು ನಿರೀಕ್ಷಿಸುತ್ತಿದ್ದಾರೆ.

ನೆರೆ ಹಾವಳಿಯಿಂದ ಹಾನಿಗೊಳಗಾದ ರಸ್ತೆ ಮತ್ತು ನೀರು ಸರಬರಾಜು ಯೋಜನೆಗಳಿಗೆ ಮುಳುಗಡೆ ಗ್ರಾಮಗಳಲ್ಲಿ ಕಾರ್ಯ ಕೈಕೊಳ್ಳಲು ರಸ್ತೆ ಅಭಿವೃದ್ಧಿಗಾಗಿ ೧೭ ಗ್ರಾಮಗಳಿಗೆ ೨೯ ಲಕ್ಷ ರೂಪಾಯಿ ಮಂಜೂರಿಗಾಗಿ ಮತ್ತು ಕುಡಿಯುವ ನೀರು ಸರಬರಾಜಿಗಾಗಿ ೧೫ ಗ್ರಾಮಗಳಿಗಾಗಿ ೧೪ ಲಕ್ಷ ರೂಪಾಯಿಗಳ ಮಂಜೂರಿಗಾಗಿ ಸಹಾಯಕ ಕಾರ್ಯ ನಿರ್ವಾಹಕ ಅಭಿಯಂತರರು ಪಂಚಾಯತ್‌ರಾಜ್ (ಇಂ) ಉಪವಿಭಾಗ ದೇವದುರ್ಗದವರು ಸರಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಪ್ರಗತಿ ಸಾಧಿಸುತ್ತಿರುವ ಬಗೆಗೆ ವಿವರಿಸಿದರು. ವಿವರ ಈ ಕೆಳಗಿನಂತೆ ಕಂಡುಕೊಳ್ಳಬಹುದು.

## ದೇವದುರ್ಗ ತಾಲ್ಲೂಕಿನಲ್ಲಿ ಕೃಷ್ಣಾ ನದಿ ಪ್ರವಾದಿಂದ ಬೆಳೆಹಾನಿಯಾದ ಬಗ್ಗೆ ಮಾಹಿತಿ

### ಕೋಷ್ಟಕ ೬

| ಕ್ರ. ಸಂ. | ಹೋಬಳಿಯ ಹೆಸರು | ಗ್ರಾಮಗಳ ಸಂಖ್ಯೆ | ಫಲಾನುಭವಿಗಳ ಸಂಖ್ಯೆ | ನೀರಾವರಿ | | ಖುಷ್ಕಿ | | ಒಟ್ಟು | | ಹಾನಿಯ ಮೊತ್ತ ಲಕ್ಷಗಳಲ್ಲಿ | ಮಂಜೂರು ಮಾಡಿದ ಮೊತ್ತ |
|---|---|---|---|---|---|---|---|---|---|---|---|
| | | | | ಕ್ಷೇತ್ರ (ಹೆಕ್ಟೇರ್) | ಮೊತ್ತ | ಕ್ಷೇತ್ರ ಹೆಕ್ಟೇರ್ | ಮೊತ್ತ | ಕ್ಷೇತ್ರ ಹೆಕ್ಟೇರ್ | ಮೊತ್ತ | | |
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ |
| ೧ | ದೇವದುರ್ಗ | ೧೭ | ೩೮೪ | ೭೧.೦೨ | ೩,೫೫,೧೦೦.೦೦ | ೨೫೭.೧೨ | ೫,೧೪,೨೪೦.೦೦ | ೩೨೮.೧೪ | ೮,೬೯,೩೪೦.೦೦ | ೬.೬೫೨ | ೮,೬೯,೩೪೦.೦೦ |
| ೨ | ಗಬ್ಬೂರು | ೦೭ | ೮೫ | ೨೧.೭೯ | ೧,೦೮,೯೫೦.೦೦ | ೪೭.೬೧ | ೯೫,೨೨೦.೦೦ | ೬೯.೪೦ | ೨,೦೪,೧೭೦.೦೦ | ೧.೪೦೩ | ೨,೦೪,೧೭೦.೦೦ |
| ೩ | ಜಾಲಹಳ್ಳಿ | ೦೯ | ೩೧೭ | ೧೮.೧೫ | ೯೦,೭೫೦.೦೦ | ೨೨೦.೫೯ | ೪,೨೨,೦೮೦.೦೦ | ೨೩೮.೭೪ | ೫,೩೨,೮೩೦.೦೦ | ೬.೪೭೨ | ೫,೩೨,೮೩೦.೦೦ |
| | ಒಟ್ಟು | ೩೩ | ೭೮೬ | ೧೧೦.೯೬ | ೫,೫೪,೮೦೦.೦೦ | ೫೨೫.೩೨ | ೧೦,೫೧,೫೪೦.೦೦ | ೬೩೬.೨೮ | ೧೬,೦೬,೩೪೦.೦೦ | ೧೪.೫೨೭ | ೧೬,೦೬,೩೪೦.೦೦ |

ಮೂಲ ಆಧಾರ ಸರ್ಕಾರ ಪತ್ರಗಳು.

## ಗ್ರಾಮವಾರು ಹಾಗೂ ಫಲಾನುಭವಿಗಳ ಬೆಳೆನಷ್ಟದ ವಿವರಗಳು

| ಕ್ರ. ಸಂ. | ಗ್ರಾಮದ ಹೆಸರು | ಬೆಳೆನಷ್ಟದ ವಿವರ ಹೆಕ್ಟೇರ್‌ಗಳಲ್ಲಿ | | | ನಷ್ಟವಾದ ಮೊತ್ತ | ಪಾವತಿಸಲು ಶಿಫಾರಸ್ಸು ಮಾಡಿದ ಒಟ್ಟು ಮೊತ್ತ | ಪಾವತಿಸಲು ಮೊತ್ತ | ಹಾನಿ ಅನುಭವಿಸಿದ ರೈತರ ಸಂಖ್ಯೆ |
|---|---|---|---|---|---|---|---|---|
| | | ನೀರಾವರಿ ಕ್ಷೇತ್ರ | ಖುಷ್ಕಿ ಕ್ಷೇತ್ರ | ಒಟ್ಟು | | | | |
| ೧ | ೨ | ೩ | ೪ | ೫ | ೬ | ೭ | ೮ | ೯ |
| ೧ | ಆಪಾಳ | ೧.೦೦ | ೮.೮೦ | ೯.೮೦ | ೨,೨೬,೦೦೦ | ೨೨,೬೦೦ | ೨೨,೬೦೦ | ೬ |
| ೨ | ಮದರಕಲ್ | ೨.೪೦ | ೧.೦೨ | ೩.೪೨ | ೧,೫೦,೦೦೦ | ೧೪,೪೦೦ | ೧೪,೪೦೦ | ೭ |
| ೩ | ಹೀರೆರಾಯಕುಂಪಿ | ೦.೫೦ | ೧೧೮೦ | ೧೨.೩೦ | ೨,೫೮,೦೦೦ | ೨,೫೮,೦೦೦ | ೨,೫೮,೦೦೦ | ೧೮ |
| ೪ | ಗಾಗಲ್ | ೨.೮೦ | ೧೩.೮೦ | ೧೬.೬೦ | ೪,೨೬,೦೦೦ | ೪,೨೬,೦೦೦ | ೪,೨೬,೦೦೦ | ೧೧ |
| ೫ | ಗೂಗಲ್ | ೦ | ೯.೩೧ | ೯.೩೧ | ೮೬,೨೦೦ | ೧೮,೬೨೦ | ೧೮,೬೨೦ | ೭ |
| ೬ | ಇಟಗಿ | ೯.೩೯ | ೨.೬೦ | ೧೧.೯೯ | ೫,೨೧,೫೦೦ | ೫೨,೧೫೦ | ೫೨,೧೫೦ | ೨೦ |
| ೭ | ಬಸವಂತಪುರ | ೫.೬೦ | ೦ | ೫.೮೦ | ೨,೯೦,೦೦೦ | ೨೯,೦೦೦ | ೨೯,೦೦೦ | ೯ |
| ೮ | ಅಂಚೆಸೂಗುರು | ೨.೮೦ | ೯.೧೦ | ೧೧.೮೦ | ೩,೨೦,೦೦೦ | ೩೨,೦೦೦ | ೩೨,೦೦೦ | ೧೬ |
| ೯ | ಕರಿಕಳ್ಳಿ | ೨.೮೦ | ೧.೬೦ | ೪.೪೦ | ೧,೭೨,೦೦೦ | ೧೭,೨೦೦ | ೧೭,೨೦೦ | ೮ |
| ೧೦ | ಕೊಪ್ಪರ | ೭.೪೦ | ೧೦.೪೦ | ೧೭.೮೦ | ೫,೭೮,೦೦೦ | ೫೭,೮೦೦ | ೫೭,೮೦೦ | ೨೩ |
| ೧೧ | ಪರತಪುರ | ೦ | ೧೬.೪೦ | ೧೬.೪೦ | ೩,೨೮,೦೦೦ | ೩೨,೮೦೦ | ೩೨,೮೦೦ | ೨೦ |
| ೧೨ | ಲಿಂಗದಹಳ್ಳಿ | ೪.೪೦ | ೫೩.೨೪ | ೫೭.೬೪ | ೧೨,೮೪,೮೦೦ | ೧,೨೮,೪೮೦ | ೧,೨೮,೪೮೦ | ೭೧ |
| ೧೩ | ಚಪ್ಪಾಳಿಕೆ | ೬.೫೦ | ೧೭.೪೯ | ೨೩.೯೯ | ೬,೭೪,೮೦೦ | ೬೭,೪೮೦ | ೬೭,೪೮೦ | ೨೭ |
| ೧೪ | ಹೇರೂರು | ೦ | ೧೨.೧೨ | ೧೨.೧೨ | ೨,೪೨,೪೦೦ | ೨೪,೨೪೦ | ೨೪,೨೪೦ | ೧೪ |
| ೧೫ | ಹೂಪನಹೆಡಿಗಿ | ೬.೦೦ | ೦ | ೬.೦೦ | ೩,೦೦,೦೦೦ | ೩೦,೦೦೦ | ೩೦,೦೦೦ | ೮ |
| ೧೬ | ಜೋಳದದಡಿಗಿ | ೦.೪೦ | ೨೮.೯೦ | ೨೯.೩೦ | ೫,೯೮,೦೦೦ | ೫೯,೮೦೦ | ೫೯,೮೦೦ | ೩೧ |
| ೧೭ | ಯಾಟಗಲ್ | ೪.೩೦ | ೯.೮೫ | ೧೪.೧೫ | ೪,೨೨,೦೦೦ | ೪೨,೨೦೦ | ೪೨,೨೦೦ | ೧೬ |

| ೧೮ | ದೊಂಡಂಬಳ್ಳಿ | ೧.೦೦ | ೨೦.೨೦ | ೨೧.೨೦ | ೪,೫೪,೦೦೦ | ೪೫,೪೦೦ | ೪೫,೪೦೦ | ೨೦ |
|---|---|---|---|---|---|---|---|---|
| ೧೯ | ಕುರ್ಕಿಹಳ್ಳಿ | ೧೩.೦೪ | ೪.೬೦ | ೧೭.೬೦ | ೭,೪೪,೦೦೦ | ೭೪,೪೦೦ | ೭೪,೪೦೦ | ೧೫ |
| ೨೦ | ಹೇರುಂಡಿ | ೦ | ೩೨.೮೧ | ೩೨.೮೧ | ೬,೫೬,೨೦೦ | ೬೫,೬೨೦ | ೬೫,೬೨೦ | ೪೫ |
| ೨೧ | ವಗಡಂಬಳಿ | ೦ | ೯.೬೦ | ೯.೬೦ | ೧,೯೨,೦೦೦ | ೧೯,೨೦೦ | ೧೯,೨೦೦ | ೧೨ |
| ೨೨ | ಗೋಪಾಳಪುರ | ೦ | ೨೫.೩೦ | ೨೫.೩೦ | ೫,೦೬,೦೦೦ | ೫೦,೬೦೦ | ೫೦,೬೦೦ | ೨೮ |
| ೨೩ | ನಿಲವಂಜಿ | ೦ | ೩೬.೫೦ | ೩೬.೫೦ | ೭,೩೦,೦೦೦ | ೭೩,೦೦೦ | ೭೩,೦೦೦ | ೩೯ |
| ೨೪ | ಮುದುಗೋಡ | ೩.೦೦ | ೧೪.೦೫ | ೧೭.೦೫ | ೪,೪೦,೦೦೦ | ೪೪,೦೦೦ | ೪೪,೦೦೦ | ೨೨ |
| ೨೫ | ಬುದ್ದಿನ್ನಿ | ೨.೪೦ | ೧೮.೬೩ | ೨೧.೦೩ | ೪,೯೨,೬೦೦ | ೪೯,೨೬೦ | ೪೯,೨೬೦ | ೨೯ |
| ೨೬ | ಬುಂಕಲ್‌ದೊಡ್ಡಿ | ೦ | ೧೫.೧೦ | ೧೫.೧೦ | ೩,೦೦,೦೦೦ | ೩೦,೦೦೦ | ೩೦,೦೦೦ | ೧೯ |
| ೨೭ | ಚಿಂಚೋಡಿ | ೦ | ೨೧.೯೬ | ೨೧.೯೬ | ೪,೩೯,೨೦೦ | ೪೩,೯೨೦ | ೪೩,೯೨೦ | ೩೫ |
| ೨೮ | ಅಂಜಳ | ೦ | ೫೪.೮೫ | ೫೪.೮೫ | ೧೦,೯೭,೦೦೦ | ೧,೦೯,೭೦೦ | ೧,೦೯,೭೦೦ | ೭೩ |
| ೨೯ | ಮೆದರಗೋಳ | ೦ | ೧೦.೪೦ | ೧೦.೪೦ | ೨೦,೮೦೦ | ೨,೦೮೦ | ೨,೦೮೦ | ೧೦ |
| ೩೦ | ಬೇಣಕಲ್ | ೨೩.೫೬ | ೨.೦೦ | ೨೫.೫೬ | ೧೨,೧೮,೦೦೦ | ೧,೨೧,೮೦೦ | ೧,೨೧,೮೦೦ | ೨೫ |
| ೩೧ | ಪೀರಗೋಟ | ೧.೮೫ | ೯.೯೨ | ೧೧.೭೭ | ೨,೯೦,೯೦೦ | ೨೯,೦೯೦ | ೨೯,೦೯೦ | ೨೮ |
| ೩೨ | ಬಾಗೂರು | ೦ | ೩೭.೪೯ | ೩೭.೪೯ | ೭,೪೯,೮೦೦ | ೭೪,೯೮೦ | ೭೪,೯೮೦ | ೪೩ |

ಮೂಲ ಆಧಾರ ಸರ್ಕಾರಿ ಪತ್ರಗಳು

# ೨೦೦೫ನೇ ಸಾಲಿನಲ್ಲಿ ಆದ ಹಾನಿ

| ಕ್ರ. ಸಂ. | ಹೋಬಳಿ | ಒಟ್ಟು ಗ್ರಾಮಗಳು | ಒಟ್ಟು ಫಲಾನುಭವಿಗಳ ಸಂಖ್ಯೆ | ಹಾನಿಯಾದ ವಿಸ್ತೀರ್ಣ | | ಪರಿಹಾರ | | ಒಟ್ಟು ಪರಿಹಾರದ ಮೊತ್ತ |
|---|---|---|---|---|---|---|---|---|
| | | | | ಖುಷ್ಕಿ | ನೀರಾವರಿ | ಖುಷ್ಕಿ | ನೀರಾವರಿ | |
| ೧ | ೨ | ೩ | ೪ | ೫ | ೬ | ೭ | ೮ | ೯ |
| ೧ | ಗಬ್ಬೂರು | ೮ | ೩೪೬ | ೪೫೫.೩೫ | ೨೩೭.೯೦ | ೯.೧೦.೧೬೦ | ೧೭,೮೯,೫೦೦ | ೨೧,೦೦,೧೬೦ |
| ೨ | ಜಾಲಹಳ್ಳಿ | ೯ | ೫೧೪ | ೪೮೮.೮೫ | ೧೪.೭೫ | ೯,೭೭,೭೦೦ | ೭೩,೭೫೦ | ೧೦,೫೧,೪೫೦ |
| ೩ | ದೇವದುರ್ಗ | ೧೭ | ೧೩೧೨ | ೧೦೩೬.೦೭ | ೮೩೬೧೩ | ೨೦,೭೨,೧೪೦ | ೧೬,೫೦,೬೫೦ | ೩೭,೫೨.೭೯೦ |
| ಒಟ್ಟು | | ೩೪ | ೨೧೭೨ | ೧೯೮೦.೨೫ | ೧೦೮೮.೭೮ | ೩೬,೬೦,೫೦೦ | ೨,೯೪,೩೯೦ | ೬೯,೦೪,೪೦೦ |

## ೨೦೦೬ನೇ ಸಾಲಿನಲ್ಲಿ ಆದ ಹಾನಿ

| ಕ್ರ. ಸಂ. | ಹೋಬಳಿ | ಒಟ್ಟು ಗ್ರಾಮಗಳು | ಒಟ್ಟು ಫಲಾನುಭವಿಗಳ ಸಂಖ್ಯೆ | ಹಾನಿಯಾದ ವಿಸ್ತೀರ್ಣ | | ಪರಿಹಾರ | | ಒಟ್ಟು ಪರಿಹಾರದ ಮೊತ್ತ |
|---|---|---|---|---|---|---|---|---|
| | | | | ಖುಷ್ಕಿ | ನೀರಾವರಿ | ಖುಷ್ಕಿ | ನೀರಾವರಿ | |
| ೧ | ೨ | ೩ | ೪ | ೫ | ೬ | ೭ | ೮ | ೯ |
| ೧ | ಗಬ್ಬೂರು | ೦೭ | ೮೫ | ೪೭.೬೧ | ೨೫೭.೧೨ | ೯೫,೨೨೦ | ೧.೦೮,೯೫೦ | ೨.೦೪,೧೭೦ |
| ೨ | ಜಾಲಹಳ್ಳಿ | ೦೯ | ೩೧೭ | ೨೨೦.೫೯ | ೪೭.೬೧ | ೪.೪೨.೦೮೦ | ೯೦,೭೫೦ | ೫.೩೨,೮೩೦ |
| ೩ | ದೇವದುರ್ಗ | ೧೭ | ೩೮೪ | ೨೫೭.೧೨ | ೨೨೦.೫೯ | ೫.೧೪.೨೪೦ | ೩,೫೫,೧೦೦ | ೮,೬೨,೩೪೦ |
| | ಒಟ್ಟು | ೩೩ | ೭೮೬ | ೫೨೫.೩೨ | ೧೧೦೯೬ | ೧೦.೫೧.೫೪೦ | ೫,೫೪,೮೦೦ | ೧೬.೦೬.೩೪೦ |

## ಪರಿಹಾರ ಕಾಮಗಾರಿಗಳ ವಿವರ

| ಕ್ರ. ಸಂ. | ಕಾಮಗಾರಿಯ ವಿವರ | ಉದ್ದ ಕಿ.ಮೀ | ಸಿ.ಡಿ | ಅಂದಾಜು ಮೊತ್ತ (ಲಕ್ಷಗಳಲ್ಲಿ) |
|---|---|---|---|---|
| ೧. | ಲಿಂಗದಳ್ಳಿ ಹತ್ತಿರ ರಸ್ತೆ ಮತ್ತು ಸಿ.ಡಿ. ದುರಸ್ತಿ | ೫.೦೦ | ೧ | ೨.೦೦ |
| ೨. | ಶಂಕರಬಂಡಿ-ಅಂಚೆಸೂಗೂರು ರಸ್ತೆಯಿಂದ ಅಂಜಳ ರಸ್ತೆ ದುರಸ್ತಿ ಹಾಗೂ ಸಿ.ಡಿ. ನಿರ್ಮಾಣ | ೨.೦೦ | ೪ | ೪.೦೦ |
| ೩. | ದೇವದುರ್ಗ ಪದವಿ ಕಾಲೇಜಿನಿಂದ ದೊಂಡಂಬಳಿವರೆಗೆ ರಸ್ತೆ ಹಾಗೂ ಸಿ.ಡಿ. ದುರಸ್ತಿ | ೮.೦೦ | ೫ | ೬.೦೦ |
| ೪. | ಮದರಕಲ್ಲ ಬಸವಂತಪುರ ರಸ್ತೆಯಿಂದ ಅಪ್ರಾಳ ರಸ್ತೆ ದುರಸ್ತಿ ಹಾಗೂ ಸಿಡಿ ನಿರ್ಮಾಣ | ೨.೦೦ | ೧ | ೫.೦೦ |
| ೫. | ಶಂಕರಬಂಡಿ ಅಂಚೆಸೂಗೂರು ರಸ್ತೆ ದುರಸ್ತಿ | ೬.೦೦ | ೦ | ೩.೦೦ |
| ೬. | ಗೂಗಲ್ ಮುಖ್ಯರಸ್ತೆಯಿಂದ ಯಾಟಗಲ್‌ವರೆಗೆ ರಸ್ತೆ ದುರಸ್ತಿ | ೨.೦೦ | ೦ | ೫.೦೦ |
| ೭. | ಜಂಬಲದಿನ್ನಿ ಹೇರುಂಡಿ ಗ್ರಾಮದ ರಸ್ತೆ ಹಾಗೂ ಸಿಡಿ ದುರಸ್ತಿ | ೨.೫೦ | ೩ | ೪.೦೦ |
| ೮. | ಜಾಲಹಳ್ಳಿ ಮುಮುಗೋಟ ರಸ್ತೆ ದುರಸ್ತಿ | ೫.೦೦ | ೦ | ೨.೦೦ |
| ೯. | ಬಾಗೂರು ಮೇದನಾಪುರ ರಸ್ತೆ ದುರಸ್ತಿ | ೧.೫೦ | ೦ | ೧.೦೦ |
| ೧೦. | ಹಿರೇರಾಯಕುಂಪಿ ಗೂಗಲ್ ರಸ್ತೆಗೆ ಹಾರ್ಡ್ ಪ್ಯಾಕೇಜ್ | ೦ | ೧ | ೮.೦೦ |
| ೧೧. | ಜೋಳದಡಗಿ ದೊಂಡಂಬಳಿ ರಸ್ತೆಗೆ ಸಿಡಿ ನಿರ್ಮಾಣ | ೦ | ೨ | ೮.೦೦ |
| ೧೨. | ಶಹಾಪುರ ದೇವದುರ್ಗ ರಸ್ತೆಯಿಂದ ಜೋಳದಡಗಿ ರಸ್ತೆ ದುರಸ್ತಿ | ೩.೦೦ | ೦ | ೪.೦೦ |
| ೧೩. | ಗೋಪಾಳಪುರ ಅಂಜಳ ರಸ್ತೆಯಿಂದ ಹಾರ್ಜ್ ಪ್ಯಾಕೇಜ್ | ೦ | ೧ | ೬.೦೦ |
| ೧೪. | ಪರತಪುರ ರಸ್ತೆಗೆ ಸಿಡಿ ನಿರ್ಮಾಣ | ೦ | ೧ | ೨.೦೦ |
| ೧೫. | ಜೋಳದಡಗಿ ದೊಂಡಂಬಳಿ ರಸ್ತೆ ದುರಸ್ತಿ | ೩.೦೦ | ೦ | ೫.೦೦ |
| ೧೬. | ಗೂಗಲ್ ಗುಡಿಯಿಂದ ಚಿಕ್ಕರಾಯಕುಂಪಿ ರಸ್ತೆ ದುರಸ್ತಿ | ೨.೨೦ | ೦ | ೬.೦೦ |
| ೧೭. | ಮದರಕಲ್ಲ ಬಸವಂತಪುರ ರಸ್ತೆಗೆ ಸಿಡಿ ನಿರ್ಮಾಣ | ೦ | ೧ | ೮.೦೦ |
| ಒಟ್ಟು | | ೪೨.೨೦ | ೨೦ | ೭೯.೦೦ |

ಮೂಲ ಆಧಾರ ಸರ್ಕಾರ ಪತ್ರಗಳು

ಗ್ರಾಮಗಳಿಗೆ ಕುಡಿಯುವ ನೀರಿನ ಸರಬರಾಜಿಗಾಗಿ ಈ ಕೆಳಕಂಡ ಗ್ರಾಮಗಳಲ್ಲಿ ಅತೀ ತೊಂದರೆ ಅನುಭವಿಸುತ್ತಿರುವುದನ್ನು, ಮನಗಂಡು ೧೫ ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಕಾರ್ಯ ಸಾಧಿಸಿರುವ ವಿಷಯ ಸಮೀಕ್ಷೆಯ ಸಮಯದಲ್ಲಿ ಕಂಡು ಬಂದಂತಹ ವಿವರ ಈ ರೀತಿ ಇದೆ.

**ನೀರು ಸರಬರಾಜು ಯೋಜನೆಗಳು**

| ಕ್ರ. ಸಂ. | ಕಾಮಗಾರಿಯ ವಿವರ | ಅಂದಾಜು ಮೊತ್ತು ಲಕ್ಷಗಳಲ್ಲಿ |
|---|---|---|
| ೧. | ಕೋಣಚಪ್ಪಳಿ ಗ್ರಾಮದಲ್ಲಿ ಮೋಟರ್ ಮತ್ತು ಸ್ಟಾಟರ್ | ೦.೭೫ |
| ೨. | ಅಂಜಳ ಗ್ರಾಮದಲ್ಲಿ ಮೋಟರ್ ಮತ್ತು ಸ್ಟಾಟರ್ | ೦.೭೫ |
| ೩. | ಮೆದರಗೋಳ ಗ್ರಾಮದಲ್ಲಿ ಮೋಟರ್ ಮತ್ತು ಸ್ಟಾಟರ್ | ೦.೭೫ |
| ೪. | ಅಂಚೆಸೂಗೂರು ಗ್ರಾಮದಲ್ಲಿ ಮೋಟರ್ ಮತ್ತು ಸ್ಟಾಟರ್ | ೦.೭೫ |
| ೫. | ಲಿಂಗದಳ್ಳಿ ಗ್ರಾಮದಲ್ಲಿ ಮೋಟರ್ ಮತ್ತು ಸ್ಟಾಟರ್ | ೦.೭೫ |
| ೬. | ವಗಡಂಬಳಿ ಗ್ರಾಮದಲ್ಲಿ ಮೋಟರ್ ಮತ್ತು ಸ್ಟಾಟರ್ | ೦.೭೫ |
| ೭. | ಹೂವಿನಹೆಡಗಿ ಗ್ರಾಮದಲ್ಲಿ ಮೋಟರ್ ಮತ್ತು ಸ್ಟಾಟರ್ | ೦.೭೫ |
| ೮. | ಜೋಳದಹೆಡಗಿ ಗ್ರಾಮದಲ್ಲಿ ಮೋಟರ್ ಮತ್ತು ಸ್ಟಾಟರ್ | ೦.೭೫ |
| ೯. | ಯಾಟಗಲ್ ಗ್ರಾಮದಲ್ಲಿ ಮೋಟರ್ ಮತ್ತು ಸ್ಟಾಟರ್ | ೦.೭೫ |
| ೧೦. | ಇಟಗಿ ಗ್ರಾಮದಲ್ಲಿ ಮೋಟರ್ ಮತ್ತು ಸ್ಟಾಟರ್ | ೦.೭೫ |
| ೧೧. | ಗೂಗಲ್ ಗ್ರಾಮದಲ್ಲಿ ಮೋಟರ್ ಮತ್ತು ಸ್ಟಾಟರ್ (ಪೈಪ್‌ಲೈನ್) | ೧.೫೦ |
| ೧೨. | ಕುರ್ಕಿಹಳ್ಳಿ ಗ್ರಾಮದಲ್ಲಿ ಮೋಟರ್ ಮತ್ತು ಸ್ಟಾಟರ್ | ೦.೭೫ |
| ೧೩. | ಅಪಾಳ ಗ್ರಾಮದಲ್ಲಿ ಮೋಟರ್ ಮತ್ತು ಸ್ಟಾಟರ್ ಪೈಪ್‌ಲೈನ್ | ೭೫ |
| ೧೪. | ಹಿರೇರಾಯಕುಂಪಿ ಗ್ರಾಮದಲ್ಲಿ ಮೋಟರ್ ಮತ್ತು ಸ್ಟಾಟರ್ ಮತ್ತು ಸ್ಟಾಟರ್ (ಪೈಪ್‌ಲೈನ್) | ೭೫ |
| ೧೫. | ಬಸವಂತಪುರ ಗ್ರಾಮದಲ್ಲಿ ಮೋಟರ್ | ೭೫ |
| | **ಒಟ್ಟು** | ೧೪.೦೦ |

ಫಲಿತ – ಮೇಲಿನ ಕೋಷ್ಟಕಗಳು ಪ್ರವಾಹಪೀಡಿತ ಸಂದರ್ಭದಲ್ಲಿ ಸರ್ಕಾರ ಕೈಗೊಂಡ ಪರಿಹಾರ ರೂಪದ ಅಭಿವೃದ್ಧಿ ಕಾರ್ಯಗಳನ್ನು ಸೂಚಿಸುತ್ತವೆ. ಆದರೆ ಈ ಪ್ರದೇಶದ ಜನರು ಈ ಸೌಲಭ್ಯಗಳಿಂದ ಸಂಪೂರ್ಣವಾಗಿ ಕಡೆಗಣಿತರಾಗಿದ್ದಾರೆ. ಸಂದರ್ಶನ ಸಮಯದಲ್ಲಿ ಕೋಷ್ಟಕದಲ್ಲಿ ಒಂದು ಎಕರೆಗೆ ಪರಿಹಾರ ರೂಪವಾಗಿ (ಬೆಳೆಹಾನಿ) ೮ ಸಾವಿರ ಎಂದು ನಮೂದಿತವಾಗಿದ್ದರೆ ಫಲಾನುಭವಿಗಳಿಗೆ ಕೇವಲ ೨ ಸಾವಿರ ರೂಪಾಯಿಗಳನ್ನು ಕೊಟ್ಟಿರುವುದು ಮೌಖಿಕ ಆಧಾರಗಳಿಂದ ತಿಳಿದು ಬರುತ್ತದೆ. ದಕ್ಷಿಣ ಭಾರತದಲ್ಲಿ ಅತ್ಯಂತ ಹಿಂದುಳಿದ ತಾಲೂಕೆಂದು ಗುರುತಿಸಿಕೊಂಡಿರುವ ದೇವದುರ್ಗ. ರಾಜಕಾರಣಿಗಳು ಹಾಗೂ ಅಧಿಕಾರಿಗಳ ದಿವ್ಯ ನಿರ್ಲಕ್ಷದಿಂದ ಇನ್ನಷ್ಟು ದುಸ್ಥಿತಿಗೀಡಾಗಿದೆ.

೩.೩ ಜನತೆ :

ತಾಲ್ಲೂಕಿನ ಜನತೆ ನೈಸರ್ಗಿಕ ಸಂಪನ್ಮೂಲಗಳನ್ನು ಸದುಪಯೋಗಪಡಿಸಿಕೊಳ್ಳದೆ ಇರುವುದರಿಂದ ಈ ಹಿಂದಿನಿಂದಲೂ ಹೀನಾಯ ಸ್ಥಿತಿಯಲ್ಲಿ ಮುಂದುವರಿದಿದ್ದು, ಪ್ರಸ್ತುತ ೨೦೦೫–೦೬ನೇ ಸಾಲಿನಲ್ಲಿ ಅಕಾಲಿಕ ಪ್ರವಾಹದಿಂದ ಆಸ್ತಿ–ಪಾಸ್ತಿಗಳನ್ನು ಕಳೆದುಕೊಂಡಿರುವುದು ಕೆಲವೊಂದು ದಾಖಲೆ. ಪತ್ರಿಕೆಯ ವರದಿ ಮೂಲಕ ಹಾಗೂ ದೃಶ್ಯ ಮಾಧ್ಯಮಗಳು ಬಿತ್ತರಿಸಿದ ಸಂಗತಿಗಳಿಂದ ಸದ್ಯದ ವಾಸ್ತವಿಕ ಚಿತ್ರಣಗಳನ್ನು ಕಂಡುಕೊಳ್ಳಲಾಗಿದೆ. ತಾಲ್ಲೂಕಿನಲ್ಲಿ ಹರಿದು ಹೋಗುತ್ತಿರುವ ಕೃಷ್ಣಾನದಿ ಕೆಲವೊಂದು ಗ್ರಾಮಗಳಿಗೆ ನೀರಾವರಿ ಸೌಲಭ್ಯ ಒದಗಿಸಿ ಕಾಮಧೇನು ಆಗಿದೆ. ಮತ್ತೊಂದು ಕಡೆಯಿಂದ ಕೊಯ್ನಾ, ನಾರಾಯಣಪುರ, ಆಲಮಟ್ಟಿ ಜಲಾಶಯಗಳಲ್ಲಿ ಹೆಚ್ಚಾದ ನೀರನ್ನು ನದಿಗೆ ಹರಿಯಲು ಬಿಟ್ಟಾಗ ನದಿದಡದಲ್ಲಿ ಬರುವ ಕನಿಷ್ಠ ೩೬ ಗ್ರಾಮಗಳ ಕೃಷಿ ಭೂಮಿ ಜಲಾವೃತಗೊಂಡು, ಅವರು ಬೆಳೆದ ಬೆಳೆ ನೀರಿನಲ್ಲಿ ಮುಳುಗಿ ಗರಿಷ್ಠ ಪ್ರಮಾಣದ ಹಾನಿಗೆ ತುತ್ತಾಗಿರುವುದು ಕಂಡುಬರುತ್ತದೆ.[೭]

ಈ ಪ್ರದೇಶದ ಜನರು ಅನುಭವಿಸಿದ ಕಷ್ಟ–ನಷ್ಟ, ಆಸ್ತಿ–ಪಾಸ್ತಿಗಳ ಹಾನಿ ಹೇಳತೀರದಾಗಿದೆ. ಸರಕಾರವು ನೀಡಿದ ಪರಿಹಾರದ ಅಲ್ಪ ಮೊತ್ತವು ಅವರ ಆರ್ಥಿಕ ಪ್ರಗತಿಗೆ ಯಾವ ಆಸರೆಯೂ ಇಲ್ಲದಂತಾಗಿ ಕಂಗಾಲಾಗಿರುವುದು ಕಂಡುಬರುತ್ತದೆ.[೮] ರೈತರು ಸಂದರ್ಶನದ ಸಮಯದಲ್ಲಿ ನೀಡಿದ ತಮ್ಮ ಅನುಭವ ಇತರ ವಿಚಾರಗಳ ಬಗ್ಗೆ ಸಂದರ್ಶನದ ಆಧಾರ ಮಾಹಿತಿಗಳ ಪ್ರತಿಗಳಲ್ಲಿ ತಿಳಿಸಲಾಗಿದೆ. ಆದಾಗ್ಯೂ ೩೬ ಗ್ರಾಮಗಳು ಕೃಷ್ಣಾನದಿಯ ಪ್ರವಾಹದಲ್ಲಿ ಜಲಾವೃತಗೊಂಡು ಮುಳುಗಡೆಯಾದ ಕೆಲ ಗ್ರಾಮಗಳ ಜನತೆ ಅನುಭವಿಸಿದ ಕಷ್ಟ–ನಷ್ಟಗಳ ಬಗೆಗಿನ ಸಂಕ್ಷಿಪ್ತ ವಿವರ ಈ ರೀತಿ ಇದೆ.[೯]

ದೇವದುರ್ಗ ತಾಲ್ಲೂಕಿನ ಕೇಂದ್ರ ಸ್ಥಳದಿಂದ ೧೩ ಕಿ.ಮೀ. ಅಂತರದಲ್ಲಿದ್ದ ಮೆದರಗೋಳ ಗ್ರಾಮದ ಜನತೆಯ ಸ್ಥಿತಿಯು ಹದಗೆಟ್ಟು ಜನರ ಜೀವನವು ಅಸ್ತವ್ಯಸ್ತಗೊಂಡಿತ್ತು. ಈ ಗ್ರಾಮ ಕೃಷ್ಣಾನದಿ ದಂಡೆ ಗುಂಟಾಗಿದ್ದು, ೫.೧೦ ಫೀಟ್ ಎತ್ತರದಲ್ಲಿದ್ದ ಪ್ರಯುಕ್ತ ನೆರೆಹಾವಳಿಯಿಂದ ಗ್ರಾಮ ಜಲಾವೃತಗೊಂಡಿದ್ದಾಗ ಗ್ರಾಮದ ಮನೆಗಳಲ್ಲಿ ನೀರು ನುಗ್ಗಿ ನಿಲ್ಲಲು ನೆಲೆ ಇಲ್ಲದೇ ಪರದಾಡುತ್ತಿದ್ದಾಗ ಆ ಗ್ರಾಮದ ಜನತೆ ಪುನರ್‌ವಸತಿ ಸೌಕರ್ಯದಲ್ಲಿ ವಾಸಮಾಡಿರುವುದಲ್ಲದೇ ಜೀವನ ಸಾಗಿಸಲು ಕಂಗಾಲಾದ ಪರಿಸ್ಥಿತಿಯನ್ನು ಕಂಡು ಇಡೀ ಗ್ರಾಮದ ಜನತೆಗೆ ಊಟದ ವ್ಯವಸ್ಥೆ ಮಾಡಿದ್ದನ್ನು ಜನತೆ ಸರಕಾರದ ಕಾರ್ಯವನ್ನು ಮನಮುಟ್ಟುವಂತೆ ಹೇಳಿದರು. ಆದರೆ ಅವರ ಹೊಲದಲ್ಲಿ ಬೆಳೆದ ಬೆಳೆಯು ನಾಶವಾಗಿದಲ್ಲದೇ

ಪಂಪ್‌ಸೆಟ್‌ಗಳಿಂದ ನೀರಿನ ಸೌಲಭ್ಯ ಪಡೆದು ರೈತರು. ನೆರೆ ಹಾವಳಿಯಿಂದ ಎಲ್ಲಾ ಪಂಪ್‌ಸೆಟ್‌ಗಳು ನೀರಿನಲ್ಲಿ ಮುಳುಗಿ ತೀವ್ರ ಸಂಕಷ್ಟ ಅನುಭವಿಸಿದ್ದಾರೆ. ಮುಂದೆ ಆಗುವ ನೆರೆ ಹಾವಳಿಯಿಂದ ಮುಕ್ತಿ ಪಡೆಯಲಾದರೂ ಗ್ರಾಮವನ್ನು ಸ್ಥಳಾಂತರಿಸಲು ಮನವಿ ಮಾಡಿದ್ದಾಗ್ಯೂ, ಸರ್ಕಾರವು ಈ ಕಾರ್ಯ ಪೂರ್ಣಗೊಂಡಿರದೇ ಇರುವುದು. ಇನ್ನೂ ಸೂಕ್ತ ಪರಿಹಾರ ಕಾಣದೇ ಜನತೆ ಸರಕಾರದ ಸಹಾಯ ಹಸ್ತಕ್ಕಾಗಿ ಕಾತುರದಿಂದ ಕಾಯುತ್ತಿರುವುದನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.[೧೦]

ತಾಲ್ಲೂಕಿನ ಲಿಂಗದಹಳ್ಳಿ, ಹೇರುಂಡಿ, ಅಂಜಳ ಹಾಗೂ ಇನ್ನಿತರ ಗ್ರಾಮಗಳ ಮಕ್ಕಳು ಶಾಲೆಗೆ ಹೋಗಲು ನದಿಯ ನೀರಿನಲ್ಲಿ ರಸ್ತೆಗಳು ಕೊಚ್ಚಿ ಹೋಗಿ ೮-೧೦ ದಿನಗಳವರೆಗೆ ಶಾಲೆಯ ಮುಖದರ್ಶನವಿಲ್ಲದೆ ಕಂಗಾಲಾಗಿರುವ ನೋಟ ಶೋಚನೀಯ. ಕುಡಿಯುವ ನೀರಿನ ತೊಂದರೆಯಿಂದಾಗಿ ಮುಳುಗಡೆಯಾದ ಅನೇಕ ಗ್ರಾಮಗಳ ಜನತೆ, ಅನೇಕ ರೋಗರುಜಿನಗಳಿಗೆ ತುತ್ತಾಗಿರುವುದನ್ನು ಕಾಣಬಹುದಾಗಿದೆ. ಆರೋಗ್ಯ ಕೇಂದ್ರಕ್ಕೆ ಹೋಗಿ ಔಷಧ ಪಡೆಯಲು ಕೂಡ ರಸ್ತೆ ಹದಗೆಟ್ಟು, ನೀರು ನಿಂತಿರುವುದನ್ನು ನೋಡಿ ಮುಂದಕ್ಕೆ ಹೋಗದೆ ನಿಸ್ಸಹಾಯಕ ಸ್ಥಿತಿಯನ್ನು ತಲುಪಿರುವುದು ನಿತ್ಯದ ಸತ್ಯವಾಗಿದೆ.[೧೧]

ಬುಂಕಲದೊಡ್ಡಿ, ವೀರಗೋಟ ಸುತ್ತಮುತ್ತಲಿನ ಜನತೆಯು ಮೀನು ಹಿಡಿಯುವ ಕುಲಕಸುಬು ಹೊಂದಿದ್ದು, ನೆರೆ ಹಾವಳಿಯಿಂದಾಗಿ ಮೀನು ಹಿಡಿಯುವ ಕಾರ್ಯ ಸ್ಥಗಿತಗೊಳಿಸಿ ಉಪಜೀವನಕ್ಕೆ ಕೂಲಿನಾಲಿಯನ್ನು ಆಧರಿಸಿ ತಾವು ಪಟ್ಟ ಕಷ್ಟ ಹೇಳಲೂ ಅಸಾಧ್ಯವೆಂಬ ಅಂಶ ತಿಳಿದು ಬರುತ್ತದೆ. ಸರ್ಕಾರ ಈ ಜನಾಂಗಕ್ಕೆ ಪುನರ್ ವಸತಿ ಕಲ್ಪಿಸುತ್ತಿದೆ. ಪ್ರವಾಹದ ಸಮಯದಲ್ಲಿ ಮುಳುಗಡೆಯಾದ ೩೬ ಗ್ರಾಮಗಳ ಜನತೆ ಆರ್ಥಿಕ, ಶೈಕ್ಷಣಿಕ ಜೀವನ ಉಪಯೋಗಕ್ಕಾದ ತೊಂದರೆ ತುಂಬಾ ಶೋಚನೀಯವೆನಿಸಿದೆ.

ನದಿಗುಂಟಾ ಇರುವ ಮುಳುಗಡೆಯಾದ ೩೬ ಗ್ರಾಮಗಳ ಜನತೆ ಬೆಳೆದ ಬೆಳೆಗೆ ಸೂಕ್ತ ಬೆಲೆ ಸಿಗದೇ, ಬಿತ್ತಿದ ಬೀಜವು ನೀರಿನಲ್ಲಿ ಮುಳುಗಿ ಇದಕ್ಕಾಗಿ ಸಾಲ ಮಾಡಿ ತಂದ ಬೀಜ, ಗೊಬ್ಬರ ಇನ್ನಿತರ ಖರ್ಚುಗಳನ್ನು ತೂಗಿಸಲು ಪಡುವ ತೊಂದರೆ ಹೇಳತೀರದು. ಎಷ್ಟೋ ಜನರು ಮನೆ ಮಠ ತೋರೆದು ಪಟ್ಟಣಗಳಿಗೆ ವಲಸೆ ಹೋಗಿರುವ ದೃಶ್ಯ ಸಾಮಾನ್ಯವಾಗಿದೆ.

**೩.೪ ನೆರೆಯ ಪ್ರದೇಶಗಳೊಂದಿಗೆ ದೇವದುರ್ಗ ತಾಲ್ಲೂಕನ್ನು ಅನುಲಕ್ಷಿಸಿ ಅಧ್ಯಯನ :**

ಎರಡು ತೊರೆಗಳ ನಾಡು, ಎಡೆದೊರೆಯ ನಾಡು ಎಂದೆಲ್ಲಾ ಖ್ಯಾತಿ ಪಡೆದಿರುವ ರಾಯಚೂರು ಜಿಲ್ಲೆಯ ಅತ್ಯಂತ ಹಿಂದುಳಿದ ಪ್ರದೇಶವೆಂದರೆ ದೇವದುರ್ಗ ತಾಲ್ಲೂಕು.

ಪೂರ್ವಕ್ಕೆ ರಾಯಚೂರು, ಪಶ್ಚಿಮಕ್ಕೆ ಲಿಂಗಸೂಗೂರು. ಉತ್ತರದಲ್ಲಿ ಕೃಷ್ಣಾನದಿ ಹರಿದರೆ, ದಕ್ಷಿಣಕ್ಕೆ ಮಾನ್ವಿ ತಾಲ್ಲೂಕುಗಳಿಂದ ಸುತ್ತುವರಿದಿದೆ.[೧೩]

ರಾಯಚೂರು ಜಿಲ್ಲಾವಾರು ಕಂಡುಬರುವ ಜನಸಂಖ್ಯೆ, ಭೂವಿಸ್ತರಣೆ ಗ್ರಾಮಗಳ ವಿವರವನ್ನು ಈ ಕೆಳಗಿನಂತೆ ಕೋಷ್ಟಕದಲ್ಲಿ ಗಮನಿಸಬಹುದಾಗಿದೆ.[೧೪]

| ಕ್ರ. ಸಂ. | ತಾಲ್ಲೂಕಿನ ಹೆಸರು | ಜನಸಂಖ್ಯೆ | | | ವಿಸ್ತೀರ್ಣ | ಒಟ್ಟು ಗ್ರಾಮಗಳು |
|---|---|---|---|---|---|---|
| | | ಪುರುಷ | ಮಹಿಳೆ | ಒಟ್ಟು | | |
| ೧. | ದೇವದುರ್ಗ | ೧,೧೨,೨೪೫ | ೧,೧೦,೨೧೨ | ೨,೨೨,೪೫೭ | ೧,೫೦,೭೯೫ | ೧೮೮ |
| ೨. | ರಾಯಚೂರು | ೨,೨೦,೬೭೫ | ೨,೧೪,೭೦೫ | ೪,೩೫,೩೮೨ | ೧,೫೩,೪೮೯ | ೧೬೦ |
| ೩. | ಲಿಂಗಸೂಗೂರು | ೧,೬೨,೬೨೮ | ೧,೫೮,೪೧೪ | ೩,೨೧,೦೪೨ | ೧,೫೪,೮೦೫ | ೧೯೧ |
| ೪. | ಮಾನ್ವಿ | ೧,೬೬,೦೬೩ | ೧,೬೪,೬೫೬ | ೩,೩೦,೭೧೯ | ೧,೭೮,೨೯೧ | ೧೭೧ |

**ರಾಯಚೂರು ಜಿಲ್ಲಾ ಜನಗಣತಿ ೨೦೦೧**

ದೇವದುರ್ಗ ತಾಲ್ಲೂಕಿನ ಸೀಮಾ ರೇಖೆಯಲ್ಲಿ ಬರುವ ಮೇಲ್ಕಾಣಿಸಿದ ತಾಲ್ಲೂಕಿನಲ್ಲಿ ರಾಯಚೂರು ತಾಲ್ಲೂಕು ಅತಿ ಹೆಚ್ಚು ಜನಸಂಖ್ಯೆ ಹೊಂದಿದ್ದು ಪ್ರಥಮ ಸ್ಥಾನದಲ್ಲಿದೆ. ಲಿಂಗಸೂಗೂರು ದ್ವಿತೀಯ ಸ್ಥಾನದಲ್ಲಿದೆ. ಮಾನ್ವಿ ತಾಲ್ಲೂಕು ತೃತೀಯ ಸ್ಥಾನದಲ್ಲಿದ್ದರೆ, ದೇವದುರ್ಗ ತಾಲ್ಲೂಕು ಕೊನೆಯ ಸ್ಥಾನದಲ್ಲಿದೆ. ಆರ್ಥಿಕ ಅಭಿವೃದ್ಧಿಯ ಹಿನ್ನಡೆಯೊಂದಿಗೆ ಜನಸಂಖ್ಯೆಯಲ್ಲಿ ಅತಿ ಕಡಿಮೆ ಸ್ಥಾನದ ಹೆಗ್ಗಳಿಕೆ ಪಡೆದಿದೆ. ಕೃಷ್ಣಾನದಿಯ ವ್ಯಾಪ್ತಿಯಲ್ಲಿ ರಾಯಚೂರಿನ ಲಿಂಗಸೂಗೂರು ತಾಲ್ಲೂಕಿನಲ್ಲಿ ಕೃಷಿಯು ನೀರಾವರಿ ವ್ಯಾಪ್ತಿಗೆ ಒಳಪಡುತ್ತವೆ. ದೇವದುರ್ಗ ತಾಲ್ಲೂಕು ಅತಿ ಹೆಚ್ಚಿನ ನೀರಾವರಿ ಕ್ಷೇತ್ರ ಹೊಂದಿದ್ದರೂ ಕೃಷಿ ಭೂಮಿಯನ್ನು ವ್ಯವಸಾಯಕ್ಕೆ ಯೋಗ್ಯ ರೀತಿಯಲ್ಲಿ ಬಳಸಿಕೊಳ್ಳುವಲ್ಲಿ ವಿಫಲವಾಗಿರುವುದರಿಂದ ಕೃಷಿಯಲ್ಲಿ ಹಿಂದುಳಿದಿದೆ.[೧೫]

ಈ ದಿಶೆಯಲ್ಲಿ ತಾಲ್ಲೂಕಿನ ಜನಪ್ರತಿನಿಧಿಗಳು, ಸಾರ್ವಜನಿಕರು ತಾಲ್ಲೂಕಿನಲ್ಲಿ ಹೆಚ್ಚಿನ ಪ್ರಾಥಮಿಕ ಶಾಲೆ, ಪ್ರೌಢಶಾಲೆ, ಕಾಲೇಜುಗಳ ಸ್ಥಾಪನೆಗೆ ಆಸಕ್ತಿ ವಹಿಸಿ ಶೈಕ್ಷಣಿಕ ಪ್ರಗತಿಗೆ ಮುಂದಾಗಬೇಕಾಗಿದೆ. ಬೃಹತ್ ಹಾಗೂ ಅತಿಸಣ್ಣ ಕೈಗಾರಿಕೆಗಳು ತಾಲ್ಲೂಕಿನಲ್ಲಿ ಇಲ್ಲವೇ ಇಲ್ಲ. ತಾಲ್ಲೂಕಿನಲ್ಲಿ ಹತ್ತಿ ಬೆಳೆಯುವ ಕ್ಷೇತ್ರವು ಅಧಿಕವಾಗಿದ್ದಾಗ್ಯೂ ಹತ್ತಿ ಗಿರಣಿಯ ಸ್ಥಾಪನೆಯಾಗದಿರುವುದು ತಾಲ್ಲೂಕಿನ ರೈತರ ದುರ್ದೈವವೆನ್ನಬಹುದು.

ದೇವದುರ್ಗ ತಾಲ್ಲೂಕಿನ ನೆರೆ ತಾಲ್ಲೂಕು ರಾಯಚೂರು ಜಿಲ್ಲಾ ಕೇಂದ್ರವಾಗಿದ್ದು, ಇದು ತುಂಗಭದ್ರ ಎಡದಂಡೆ ಕಾಲುವೆ ಮೂಲಕ ನೀರಾವರಿ ಸೌಲಭ್ಯ ಹೊಂದಿದೆ. ಹಾಗೂ ಕೃಷ್ಣಾ ಮೇಲ್ದಂಡೆ ಯೋಜನೆಯಡಿಯಲ್ಲಿ ಕೆಲವೊಂದು ಗ್ರಾಮಗಳು ನೀರಾವರಿ ಸೌಲಭ್ಯವನ್ನು

ಪಡೆದಿವೆ. ಈ ಭಾಗದ ಕೆಲವು ರೈತರು ತುಂಗಭದ್ರಾ ಕಾಲುವೆ ಮೂಲಕ ಕೃಷಿ ಕೈಗೊಂಡು ಆರ್ಥಿಕ ಸ್ವಾವಲಂಬಿ ಬದುಕು ನಡೆಸುತ್ತಿರುವುದನ್ನು ಕಾಣಬಹುದು. ಈ ಪ್ರದೇಶಕ್ಕೆ ಕೃಷ್ಣಾ ಮೇಲ್ದಂಡೆಯಿಂದ ನೀರಾವರಿ ಸೌಲಭ್ಯ ಒದಗಿಸಿದಲ್ಲಿ ಹೆಚ್ಚು ಆರ್ಥಿಕವಾಗಿ ಮುನ್ನಡೆಯುವ ಸಾಧ್ಯತೆ ಉಂಟು. ಅನೇಕ ಅವಕಾಶಗಳಿಂದ ವಂಚಿತವಾಗಿರುವುದು ದೇವದುರ್ಗ ತಾಲ್ಲೂಕಿನ ರೈತರು ವಿಫಲಗೊಂಡಿರುವುದು ದುರ್ದೈವವೆನ್ನಬಹುದು.[೧೬]

ರಾಯಚೂರು ಜಿಲ್ಲಾ ಕೇಂದ್ರಸ್ಥಳವಾಗಿದ್ದು, ಶಿಕ್ಷಣ, ಕೈಗಾರಿಕೆ, ವ್ಯಾಪಾರ, ಕಾರ್ಖಾನೆ, ರೈಲ್ವೆ ಸಂಪರ್ಕ ಇನ್ನಿತರ ಪ್ರಗತಿದಾಯಕ ಕಾರ್ಯ ಕೈಗೊಳ್ಳುವ ಅವಕಾಶ ಹೊಂದಿದೆ. ಆದರೆ ತಾಲ್ಲೂಕು ಕೇಂದ್ರಗಳು ಈ ಸೌಲಭ್ಯದಿಂದ ವಂಚಿತವಾಗಿವೆ.

**ಅಡಿಟಿಪ್ಪಣಿಗಳು :**

೧. ಪ್ರಧಾನ ಸಂಪಾದಕರು, ಬಿ.ಎಸ್.ವಸಂತಕುಮಾರ್, **ಸ್ಪರ್ಧಾಚೈತ್ರ**, ಸೆಪ್ಟಂಬರ್ ೨೦೦೫. ಪುಟ–೧

೨. ವಿಜಯ ಕರ್ನಾಟಕ, ೦೭.೦೮.೨೦೦೬, ಪುಟ–೨

೩. ಪ್ರಜಾವಾಣಿ, ೦೮.೦೭.೨೦೦೬, ಪುಟ–೧

೪. ಪ್ರಜಾವಾಣಿ, ೦೩.೦೮.೨೦೦೬, ಪುಟ–೩

೫. ಕಂದಾಯ ಇಲಾಖೆ ಸರಕಾರಿ ಪತ್ರಗಳು

೬. ವಿಜಯ ಕರ್ನಾಟಕ, ೦೧.೦೮.೨೦೦೬, ಪುಟ–೨

೭. ಸಂಯುಕ್ತ ಕರ್ನಾಟಕ, ೦೧.೦೮.೨೦೦೬, ಪುಟ–೧

೮. ವಿಜಯ ಕರ್ನಾಟಕ, ೦೪.೦೮.೨೦೦೬, ಪುಟ–೩

೯. ಸಂದರ್ಶನಾಧಾರಿತ ಮಾಹಿತಿಗಳು

೧೦. ಸಂಯುಕ್ತ ಕರ್ನಾಟಕ, ೦೮.೦೮.೨೦೦೬, ಪುಟ–೧

೧೧. ಪ್ರಜಾವಾಣಿ, ೦೯.೦೮.೨೦೦೬, ಪುಟ–೨

೧೨. ಸಂದರ್ಶನ ಆಧಾರಿತ ಮಾಹಿತಿಗಳು

೧೩. ಬಿ.ಟಿ.ಲಲಿತನಾಯಕ, **ದೇವದುರ್ಗ ತಾಲ್ಲೂಕು ದರ್ಶನ**, ಐಬಿಹೆಚ್ ಪ್ರಕಾಶಕರು, ೧೯೮೬, ಪುಟ.೧

೧೪. ರಾಯಚೂರು ಜಿಲ್ಲಾ ಜನಗಣತಿ ವರದಿ ೨೦೦೧

೧೫. ಸಂದರ್ಶಿಸಿದ ಆಧಾರಿತ ಮಾಹಿತಿಗಳು.

೧೬. ಡಾ.ಕೆ.ವೆಂಕಟೇಶ, ಡಾ.ಬಿ.ಸರೋಜಾ, **ಹೈದರಾಬಾದ್ ಕರ್ನಾಟಕ ವರ್ತಮಾನದ ತಲ್ಲಣಗಳು**, ಪಲ್ಲವಿ ಪ್ರಕಾಶನ, ಬಳ್ಳಾರಿ ೨೦೦೬, ಪುಟ –೧೨೧

# ಅಧ್ಯಾಯ ನಾಲ್ಕು

## ಸಂದರ್ಶನಾಧಾರಿತ ಮಾಹಿತಿಗಳು



ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ-ಆರ್ಥಿಕ ಅಧ್ಯಯನ ವಿಷಯದ ಸಂಗ್ರಹಣೆಗಾಗಿ ತಾಲ್ಲೂಕಿನಲ್ಲಿ ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ೩೬ ಗ್ರಾಮಗಳ ಸಮೀಕ್ಷೆ ಹಾಗೂ ವಾಸ್ತವಿಕ ಸ್ಥಿತಿಯನ್ನು ಪ್ರತ್ಯೇಕವಾಗಿ ವೀಕ್ಷಿಸಲಾಗಿದೆ. ಅಲ್ಲಿಯ ಜನರ ಪರಿಸ್ಥಿತಿಯನ್ನು ಅರಿಯಲೂ ೨೦ ಗ್ರಾಮಗಳ ರೈತರನ್ನು ಸಂದರ್ಶಿಸಿ ಅವರು ನೀಡಿದ ಮೌಖಿಕ ಹೇಳಿಕೆಗಳನ್ನು ಪ್ರತಿಯೊಂದು ಗ್ರಾಮ ಹಾಗೂ ವ್ಯಕ್ತಿಗಳ ಅಭಿಪ್ರಾಯ ಹಾಗೂ ಅನಿಸಿಕೆಗಳನ್ನು ಈ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ.

ಅಲ್ಲದೇ ಪ್ರವಾಹದಿಂದ ಆದ ಹಾನಿ, ಪರಿಹಾರ ಮೊತ್ತದ ವಿವರಣೆಯೂ ಸಂಗ್ರಹಣೆಯ ಅಡಿಯಲ್ಲಿ ದಾಖಲಿಸಲಾಗಿರುವುದು ರೈತರಿಗೆ ವಿತರಿಸಿದ ಪರಿಹಾರದ ಮೊತ್ತದ ಮಾಹಿತಿಯನ್ನು ತಹಶೀಲ್ದಾರರ ಕಾರ್ಯಾಲಯ ದೇವದುರ್ಗದಲ್ಲಿ ಪಡೆಯಲಾಗಿದ್ದು, ಮಾಹಿತಿಯ ಪ್ರತಿಗಳನ್ನು ಈ ಅಧ್ಯಾಯದಲ್ಲಿ ಅಳವಡಿಸಲಾಗಿದೆ. ಸಂದರ್ಶನ ಸಮಯದಲ್ಲಿ ರೈತರು ನದಿಯ ಪ್ರವಾಹದ ತಡೆಗೆ ಯಾವ ಮಾರ್ಗೋಪಾಯವಿಲ್ಲದೆ ಇದು ಬಹಳ ವರ್ಷಗಳಿಂದಲೂ ಮುಂದುವರಿಯುತ್ತಿದ್ದು, ಇದಕ್ಕೆ ಕೊನೆಯೇ ಇಲ್ಲವೆ ಎಂಬ ತಮ್ಮ ನಿಸ್ಸಾಯಕ ಸ್ಥಿತಿಯನ್ನು ವ್ಯಕ್ತಪಡಿಸಿರುತ್ತಾರೆ.

| | | | |
|---|---|---|---|
| | ಜಿಲ್ಲೆ | : | ರಾಯಚೂರು |
| | ತಾಲ್ಲೂಕು | : | ದೇವದುರ್ಗ |
| | ಹೋಬಳಿ | : | ಜಾಲಹಳ್ಳಿ |
| | ಊರು | : | ಚಿಂಚೋಡಿ |
| ೧. | ಹೆಸರು | : | ಗೋವಿಂದರಾಯ |
| ೨. | ವಯಸ್ಸು | : | ೪೮ |
| ೩. | ಸಾಂಸಾರಿಕ ಜೀವನ>ಕುಟುಂಬ ವ್ಯವಸ್ಥೆ (ಮಕ್ಕಳು ಇತ್ಯಾದಿ) | : | ೫ ಜನ ಸದಸ್ಯರು |
| ೪. | ಧರ್ಮ ಮತ್ತು ಜಾತಿ | : | ಕುರುಬರು |
| ೫. | ಹಿಂದೆ ಪ್ರವಾಹವಾಗಿದ್ದಾಗ ವರ್ಷಗಳ ನೆನಪು | : | ೧೯೬೬ರಲ್ಲಿ ಬಂದ ಪ್ರವಾಹಕ್ಕೂ ೨೦೦೫.೦೬ರ ಪ್ರವಾಹಕ್ಕೂ ಯಾವ ವ್ಯತ್ಯಾಸವು ಇರಲಿಲ್ಲ. ಈ ಪ್ರವಾಹದಿಂದ ಜನರಿಗೆ ತುಂಬಾ ತೊಂದರೆಯಾಗಿತ್ತು. ಹೊಲದಲ್ಲಿ ಬೆಳೆದ ಸೂರ್ಯಕಾಂತಿ, ಹೆಸರುಬೇಳೆ ಇನ್ನು ಮುಂತಾದ ಬೆಳೆಗಳು ನಾಶವಾದವು |
| ೬. | ೨೦೦೫-೦೬ರ ಪ್ರವಾಹ ದಿನಗಳ ಅನುಭವ | | ಪ್ರವಾಹದಿಂದ ಸುಮಾರು ೪೫.೫೦ ಜನರು ಅನೇಕ ತೊಂದರೆಗಳನ್ನು ಅನುಭವಿಸಿದ್ದಾರೆ. ಮುಖ್ಯವಾಗಿ ನೀರು, ಆಹಾರಕ್ಕೂ ಬಹಳ ಸಮಸ್ಯೆಯಿತ್ತು. |
| ೭. | ಜಿಲ್ಲಾಡಳಿತ ವಹಿಸಿದ ಕ್ರಮಗಳು | : | ಸ್ವಲ್ಪ ಕಾಳಜಿ ವಹಿಸಿದರು. |
| | *ಆಹಾರ ಮತ್ತು ಕುಡಿಯುವ ನೀರಿನ ವ್ಯವಸ್ಥೆ | | ಕುಡಿಯುವ ನೀರಿನ ವ್ಯವಸ್ಥೆ ಮಾಡಿದ್ದರು. ಉಪ್ಪುನೀರು ಸರಬರಾಜು ಮಾಡಿದ್ದರು. ಆದರೆ ಶುದ್ಧವಾದ ನೀರು ಇರಲಿಲ್ಲ. |

| | | |
|---|---|---|
| | *ವದ್ದಿಕೆ | : ಸಮಸ್ಯೆ ಕಂಡುಬಂದಿಲ್ಲ |
| | *ತಾತ್ಕಾಲಿಕ ವಸತಿ | : ಸಮಸ್ಯೆ ಕಂಡುಬಂದಿಲ್ಲ |
| | *ಬಟ್ಟೆ | : ಸಮಸ್ಯೆ ಕಂಡುಬಂದಿಲ್ಲ |
| | *ಜಾನವಾರುಗಳಿಗೆ ಮೇವು | : ಸ್ವಲ್ಪ ಒದಗಿಸಿದ್ದಾರೆ. |
| | *ಆರೋಗ್ಯ ತಪಾಸಣೆ | : ಜನರು ಕಾಯಿಲೆಗಳಿಂದ ತುಂಬಾ ತೊಂದರೆಗೊಳಗಾಗಿದ್ದರು. ಆರೋಗ್ಯ ಕೇಂದ್ರಗಳು ಇರಲಿಲ್ಲ. ಆದರೆ ತಪಾಸಣಾ ಶಿಬಿರಗಳನ್ನು ತೆರೆಯಲಾಗಿತ್ತು. |
| ೮. | ಪ್ರವಾಹದಿಂದ ಉಂಟಾದ ತೊಂದರೆಗಳ ಬಗ್ಗೆ | : ಪ್ರವಾಹದಿಂದ ಕೃಷಿ ಭೂಮಿ ಎಲ್ಲಾ ಹಾಳಾಯಿತು. ಸುಮಾರು ೧ ತಿಂಗಳು, ತಿಂಗಳುಗಳವರೆಗೆ ಕುಡಿಯುವ ನೀರಿನ ತೊಂದರೆಯಾಗಿತ್ತು. ನೀರು ಒದಗಿಸಿದ್ದರು. ಅದು ಉಪ್ಪುನೀರು, ಶುದ್ಧ ನೀರು ಇರಲಿಲ್ಲ. |
| | *ಅರ್ಥಿಕ ದುಃಸ್ಥಿತಿ | : ಜನರು ಯಾವಾಗಲೂ ಆರ್ಥಿಕವಾಗಿ ತೊಂದರೆಗಳೊಳಗಾಗುತ್ತಿರುತ್ತಾರೆ. ಅದಕ್ಕಾಗಿ ದುಡಿಯಲು ವಲಸೆ ಹೊಗುತ್ತಾರೆ. ತಮ್ಮ ಆರ್ಥಿಕ ತೊಂದರೆ ನಿವಾರಿಸಿಕೊಳ್ಳಲು ಇದೊಂದೇ ಮಾರ್ಗ. |
| | *ಶೈಕ್ಷಣಿಕ ಸಮಸ್ಯೆ | : ಪ್ರವಾಹ ಬಂದಾಗ ರಸ್ತೆ ಮೇಲೆ ನೀರು ಹರಿಯುತ್ತಿದ್ದ ಕಾರಣದಿಂದ ಮಕ್ಕಳು ಶಾಲೆಗೆ ಹೋಗುವುದಿಲ್ಲ. |
| | *ಮನೆ ಮತ್ತು ಜಾನುವಾರುಗಳ | : ಸ್ವಲ್ಪ ಮೇವು ಒದಗಿಸಿದ್ದರು. |

| | | |
|---|---|---|
| | ದುಸ್ಥಿತಿ | |
| ೯. | ಸರ್ಕಾರ ಮತ್ತು ಪ್ರವಾಹದ ಪರಿಹಾರಗಳು | : ಸರ್ಕಾರದಿಂದ ಪರಿಹಾರ ಸಿಕ್ಕಿಲ್ಲ. |
| | *ಬೆಳೆನಷ್ಟ ಹಾಗೂ ಪರಿಹಾರ | : ಬೆಳೆನಷ್ಟ ಆದವರಿಗೆ ಪರಿಹಾರಧನ ಸಿಕ್ಕಿದೆ. |
| | *ವಸತಿ ನಿರ್ಮಾಣ | : ಸಮಸ್ಯೆ ಕಂಡುಬಂದಿಲ್ಲ |
| | *ಶೈಕ್ಷಣಕ ಪ್ರಗತಿಯ ಅಂಶಗಳು | : ಸಮಸ್ಯೆ ಕಂಡುಬಂದಿಲ್ಲ |
| | *ಸರ್ಕಾರೇತರ ಸಂಸ್ಥೆಗಳ ಪಾತ್ರ | : ಸಮಸ್ಯೆ ಕಂಡುಬಂದಿಲ್ಲ |
| | *ಎನ್.ಜಿ.ಓ.ಗಳ ಪಾತ್ರ (ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ) | : ಸಮಸ್ಯೆ ಕಂಡುಬಂದಿಲ್ಲ |
| ೧೦. | ಪ್ರಸ್ತುತ ಸ್ಥಿತಿ ಗತಿ | : ಈಗಿನ ಸ್ಥಿತಿ ಏನೆಂದರೆ, ಈ ಕಡೆ ಜನರು ಯಾವಾಗಲು ವಲಸೆ ಹೋಗುತ್ತಿರುತ್ತಾರೆ. |
| | *ಹಣ ದೊರಕಿದೆಯೇ | : ಸ್ವಲ್ಪ ಹಣ ದೊರಕಿದೆ. |
| | *ಯಾವ ಪ್ರಮಾಣದಲ್ಲಿ ದೊರಕಿದೆ | : ಜನರ ಬೆಳೆ ಯಾವ ಬೆಳೆ ಎಷ್ಟು ನಾಶವಾಗಿದೆ ಅನ್ನೋದನ್ನ ಲೆಕ್ಕ ಹಾಕಿ, ಇಂತಿಷ್ಟು ಎಂದು ಕೊಟ್ಟಿದ್ದಾರೆ. ಎಷ್ಟು ಅಲ್ಪ ಪ್ರಮಾಣ ದೊರಕಿದೆ. |
| ೧೧. | ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಜಾತಿವಾರು ತಾರತಮ್ಯ ನಡೆದಿರುವುದೇ? | : ಇದರ ಬಗ್ಗೆ ಸರಿಯಾಗಿ ಗೊತ್ತಿಲ್ಲ. |
| ೧೨. | ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಸಂಘ ಸಂಸ್ಥೆಗಳ ಪಾತ್ರ | : ಯಾರು ಸಹಾಯ ಮಾಡಿಲ್ಲ |

ಸಂದರ್ಶನದ ದಿನಾಂಕ ೮.೨.೦೭

ಜಿಲ್ಲೆ : ರಾಯಚೂರು

ತಾಲ್ಲೂಕು : ದೇವದುರ್ಗ

ಹೋಬಳಿ : ಗೊಬ್ಬೂರು

ಊರು : ಬಸವಂತಪುರ

೧. ಹೆಸರು : ಹಂಪನಗೌಡ

೨. ವಯಸ್ಸು : ೨೬

೩. ಸಾಂಸಾರಿಕ ಜೀವನ>ಕುಟುಂಬ ವ್ಯವಸ್ಥೆ (ಮಕ್ಕಳು ಇತ್ಯಾದಿ) : ಅವಿಭಕ್ತ ಕುಟುಂಬ

೪. ಧರ್ಮ ಮತ್ತು ಜಾತಿ : ವೀರಶೈವ ಲಿಂಗಾಯತ

೫. ಹಿಂದೆ ಪ್ರವಾಹವಾಗಿದ್ದಾಗ ವರ್ಷಗಳ ನೆನಪು : ೨೫ ರಿಂದ ೩೦ ವರ್ಷಗಳ ಹಿಂದೆ ಪ್ರವಾಹ ಬಂದಾಗ ತುಂಬಾ ತೊಂದರೆಯಾಗಿತ್ತು ಎಂದು ನಮ್ಮ ಹಿರಿಯರು ಹೇಳುತ್ತಿರುತ್ತಾರೆ. ಆಗ ಯಾವ ಸೌಲಭ್ಯಗಳು ಇರಲಿಲ್ಲ ಎಂದು ಹೇಳುತ್ತಿರುತ್ತಾರೆ.

೬. ೨೦೦೫-೦೬ರ ಪ್ರವಾಹ ದಿನಗಳ ಅನುಭವ : ಪ್ರವಾಹ ಬಂದಾಗ ನಮ್ಮ ಊರಿನಲ್ಲಿ ತುಂಬಾ ತೊಂದರೆಗಳಾಗಿದ್ದವು. ಕೃಷಿ ಭೂಮಿಯಲ್ಲಿ ಬೆಳೆದ ಎಲ್ಲಾ ಬೆಳೆ ನೀರಿನಲ್ಲಿ ಮುಳುಗಿತ್ತು. ಹೊಲದ ಪಕ್ಕದಲ್ಲಿ ಗದ್ದೆ ತೋಟಗಳಲ್ಲಿ ಮನೆ ಮಾಡಿಕೊಂಡು, ಅಲ್ಲಿ ಬೆಳೆದ ಆಹಾರ ಧಾನ್ಯಗಳು ಮತ್ತು ಬೆಳಗಳು ಸಂಪೂರ್ಣ ನೀರಿನಲ್ಲಿ ಮುಳುಗಿದ್ದವು. ಇದರಿಂದಾಗಿ ಜನರಿಗೆ ಬೆಳೆನಷ್ಟ ತುಂಬಾ ಆಯಿತು.

| | | | |
|---|---|---|---|
| ೭. | ಜಿಲ್ಲಾಡಳಿತ ವಹಿಸಿದ ಕ್ರಮಗಳು | : | ಸ್ವಲ್ಪ ಸಹಾಯ ಮಾಡಿದ್ದಾರೆ. |
| | *ಆಹಾರ ಮತ್ತು ಕುಡಿಯುವ ನೀರಿನ ವ್ಯವಸ್ಥೆ | : | ಕುಡಿಯುವ ನೀರಿಗೆ ತೊಂದರೆಯಾಗಿತ್ತು. ಕುಡಿಯುವ ನೀರಿನ ವ್ಯವಸ್ಥೆ ಮಾಡಿದ್ದರು. ಶುದ್ಧ ನೀರು ಇರಲಿಲ್ಲ. ಆ ನೀರು ಎಲ್ಲರಿಗೂ ಸಿಗುತ್ತಿರಲಿಲ್ಲ. |
| | *ವದ್ದಿಕೆ | : | ಸಮಸ್ಯೆ ಕಂಡುಬಂದಿಲ್ಲ |
| | *ತಾತ್ಕಾಲಿಕ ವಸತಿ | : | ಸಮಸ್ಯೆ ಕಂಡುಬಂದಿಲ್ಲ |
| | *ಬಟ್ಟೆ | : | ಸಮಸ್ಯೆ ಕಂಡುಬಂದಿಲ್ಲ |
| | *ಜಾನವಾರುಗಳಿಗೆ ಮೇವು | : | ಸ್ವಲ್ಪ ಒದಗಿಸಿದ್ದಾರೆ. |
| | *ಆರೋಗ್ಯ ತಪಾಸಣೆ | : | ಸಮಸ್ಯೆ ಕಂಡುಬಂದಿಲ್ಲ |
| ೮. | ಪ್ರವಾಹದಿಂದ ಉಂಟಾದ ತೊಂದರೆಗಳ ಬಗ್ಗೆ | : | ಪ್ರವಾಹದಿಂದ ಕೃಷಿ ಬೆಳೆ ಎಲ್ಲ ಹಾಳಾಯಿತು. ಪಂಪ್‌ಸೆಟ್‌ಗಳು ಮುಳುಗಿದ್ದವು. ಟಿ.ಸಿ. ಮುಳುಗಿತ್ತು. |
| | *ಅರ್ಥಿಕ ದುಃಸ್ಥಿತಿ | : | ಆರ್ಥಿಕವಾಗಿ ಇಲ್ಲಿಯ ಎಲ್ಲಾ ಜನರು ತೊಂದರೆ ಅನುಭವಿಸಿದರು. ಬೆಳೆದ ಬೆಳೆಯಲ್ಲಾ ನಾಶವಾಗಿ, ಜನರು ತಮ್ಮ ಜೀವನ ಸಾಗಿಸಲೂ ಎಲ್ಲಾದರೂ ದುಡಿಯಬೇಕಲ್ಲ, ಅದಕ್ಕಾಗಿ ಪುಣೆ, ಬೆಂಗಳೂರು ನಗರಗಳಿಗೆ ವಲಸೆ ಹೋದರು. ನಮ್ಮ ಹಳ್ಳಿ ಶೇಕಡ ೭೦ರಷ್ಟು ಜನ ದುಡಿಯಲು ಬೇರೆ ಕಡೆ ಹೋಗಿದ್ದಾರೆ. |
| | *ಶೈಕ್ಷಣಿಕ ಸಮಸ್ಯೆ | : | ಶಿಕ್ಷಣ ಸಮಸ್ಯೆ ಸ್ವಲ್ಪ ಕಡಿಮೆ ಯಾಗಿತ್ತು ಇದೆ. ಪ್ರವಾಹ ಬಂದಾಗ ಶಾಲಾ ಮಕ್ಕಳು ಯಾರು ಶಾಲೆಗೆ ಹೋಗೋದಿಲ್ಲ. |

| | | |
|---|---|---|
| *ಮನೆ ಮತ್ತು ಜಾನುವಾರುಗಳ ದುಸ್ಥಿತಿ | : | ಜಾನುವಾರುಗಳಿಗೆ ಸ್ವಲ್ಪ ಮೇವು ಒದಗಿಸಿದ್ದರು. |
| ೯. ಸರ್ಕಾರ ಮತ್ತು ಪ್ರವಾಹದ ಪರಿಹಾರಗಳು | : | ಸ್ವಲ್ಪ ಪರಿಹಾರ ಒದಗಿಸಿದ್ದಾರೆ. |
| *ಬೆಳೆನಷ್ಟ ಹಾಗೂ ಪರಿಹಾರ | : | ೧ ಎಕರೆಗೆ ೧೫೦೦ ಅಥವಾ ೨೦೦೦ ರೂಪಾಯಿ ಪರಿಹಾರ ನೀಡಿದ್ದಾರೆ. ಆದರೆ ಕೆಲವೊಬ್ಬರಿಗೆ ಮಾತ್ರ. |
| *ವಸತಿ ನಿರ್ಮಾಣ | : | ಸಮಸ್ಯೆ ಕಂಡುಬಂದಿಲ್ಲ |
| *ಶೈಕ್ಷಣಿಕ ಪ್ರಗತಿಯ ಅಂಶಗಳು | : | ಇತ್ತೀಚೆಗೆ ನಮ್ಮೂರಿನಲ್ಲಿ ಶಾಲೆಗಳು ನಡೆಯುತ್ತಿವೆ. ಮಕ್ಕಳು ಶಾಲೆಗೆ ಹೋಗುತ್ತಿರುತ್ತಾರೆ. |
| *ಸರ್ಕಾರೇತರ ಸಂಸ್ಥೆಗಳ ಪಾತ್ರ | : | ಯಾರು ಸಹಾಯ ಮಾಡಿಲ್ಲ. |
| *ಎನ್.ಜಿ.ಓ.ಗಳ ಪಾತ್ರ (ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ) | : | ಸಮಸ್ಯೆ ಕಂಡುಬಂದಿಲ್ಲ |
| ೧೦. ಪ್ರಸ್ತುತ ಇಂದಿನ ಸ್ಥಿತಿ ಗತಿ | : | ಈಗ ಊರಿನಲ್ಲಿ ಜನರೆಲ್ಲರೂ ಬೇರೆ ಕಡೆ ದುಡಿಯಲು ವಲಸೆ ಹೋಗಿದ್ದಾರೆ. ವೃದ್ಧರು, ಅಸಾಹಾಕರು ಊರಿನಲ್ಲಿದ್ದಾರೆ. |
| *ಹಣ ದೊರಕಿದೆಯೇ | : | ಸ್ವಲ್ಪ ದೊರಕಿದೆ. |
| *ಯಾವ ಪ್ರಮಾಣದಲ್ಲಿ ದೊರಕಿದೆ | : | ೧ ಎಕರೆಗೆ ೧೫೦೦ ರೂಪಾಯಿ ಕೊಟ್ಟಿದ್ದಾರೆ. ಕೆಲವರಿಗೆ ಮಾತ್ರ. |
| ೧೧. ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಜಾತಿವಾರು ತಾರತಮ್ಯ ನಡೆದಿರುವುದೇ? | : | ಇಲ್ಲಾ |
| ೧೨. ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಸಂಘ ಸಂಸ್ಥೆಗಳ ಪಾತ್ರ | : | ಇಲ್ಲಾ |

ಸಂದರ್ಶನದ ದಿನಾಂಕ ೯.೨.೦೭

ಜಿಲ್ಲೆ : ರಾಯಚೂರು

ತಾಲ್ಲೂಕು : ದೇವದುರ್ಗ

ಹೋಬಳಿ : ಜಾಲಹಳ್ಳಿ

ಊರು : ಹೇರುಂಡಿ

೧. ಹೆಸರು : ಶಿವಕುಮಾರ್

೨. ವಯಸ್ಸು : ೨೭

೩. ಸಾಂಸಾರಿಕ ಜೀವನ>ಕುಟುಂಬ ವ್ಯವಸ್ಥೆ (ಮಕ್ಕಳು ಇತ್ಯಾದಿ) : ೭ ಜನ ಸದಸ್ಯರು.

೪. ಧರ್ಮ ಮತ್ತು ಜಾತಿ : ವೀರಶೈವ ಲಿಂಗಾಯತ

೫. ಹಿಂದೆ ಪ್ರವಾಹವಾಗಿದ್ದಾಗ ವರ್ಷಗಳ ನೆನಪು : ಪ್ರವಾಹ ಬಂದಾಗ ನೀರೆಲ್ಲಾ ಊರಲ್ಲಿ ತುಂಬಿದಾಗ ಊರುಗೋಲು ಉಪಯೋಗಿಸುತ್ತಿದ್ದರು ಎಂದು ನಮ್ಮ ಹಿರಿಯರು ಹೇಳುತ್ತಿರುತ್ತಾರೆ. ಪ್ರವಾಹದ ಭೀತಿಯಿಂದ ಕೆಲವು ಜನರು ಊರುಬಿಟ್ಟು ಹೋಗಿದ್ದಾರೆ.

೬. ೨೦೦೫-೦೬ರ ಪ್ರವಾಹ ದಿನಗಳ ಅನುಭವ : ಜಮೀನುಗಳಿಗೆ ನೀರು ಬಂದು ಜನರಿಗೆ ತೊಂದರೆಯಾಗಿದೆ. ನಾಲೆ ಮತ್ತು ಹೊತ್ತುಗಳಿಂದ ನೀರು ಬಂದು ರೈತರಿಗೆ ತೊಂದರೆಯಾಗಿತ್ತು.

೭. ಜಿಲ್ಲಾಡಳಿತ ವಹಿಸಿದ ಕ್ರಮಗಳು : ಯಾವ ಕ್ರಮ ಕೈಗೊಂಡಿಲ್ಲ.

*ಆಹಾರ ಮತ್ತು ಕುಡಿಯುವ: ನೀರಿನ ವ್ಯವಸ್ಥೆ : ಕೆಲವೊಂದು ಕಡೆ ಬೋರ್‌ವೆಲ್‌ಗಳ ಉಪಯೋಗವಿದೆ.

*ವದ್ದಿಕೆ : ಸಮಸ್ಯೆ ಕಂಡುಬಂದಿಲ್ಲ

*ತಾತ್ಕಾಲಿಕ ವಸತಿ : ಸಮಸ್ಯೆ ಕಂಡುಬಂದಿಲ್ಲ

*ಬಟ್ಟೆ : ಸಮಸ್ಯೆ ಕಂಡುಬಂದಿಲ್ಲ

*ಜಾನವಾರುಗಳಿಗೆ ಮೇವು : ಮೇವು ಸಮಸ್ಯೆ ಇತ್ತು.

*ಆರೋಗ್ಯ ತಪಾಸಣೆ : ಇಲ್ಲ. ದೇವದುರ್ಗಕ್ಕೆ ಬಂದು, ಆರೋಗ್ಯ ತಪಾಸಣೆ ಮಾಡಿಸಿಕೊಂಡು ಹೋಗಬೇಕಾಗುತ್ತದೆ.

೮. ಪ್ರವಾಹದಿಂದ ಉಂಟಾದ ತೊಂದರೆಗಳ ಬಗ್ಗೆ : ಜನರು ಕೂಲಿ ಕೆಲಸಗಳು ಇಲ್ಲದೇ ಬೇರೆ ಕಡೆ ವಲಸೆ ಹೋಗುತ್ತಾರೆ.

*ಅರ್ಥಿಕ ದುಸ್ಥಿತಿ : ಜನರು ಆರ್ಥಿಕ ಸ್ಥಿತಿ ಹೆಚ್ಚು ಕಂಡುಬರುವುದು.

*ಶೈಕ್ಷಣಿಕ ಸಮಸ್ಯೆ : ತೊಂದರೆಯಾಗಿತ್ತು. ಶಾಲೆಗೆ ಬರಬೇಕಾದರೆ, ಶಾಲಾ ಮಕ್ಕಳು ನೀರು ನಿಂತಿರೊದರಿಂದ, ಊರು ಸುತ್ತುವರೆದು ಶಾಲೆಗೆ ಬರಬೇಕಾಗುತ್ತದೆ.

*ಮನೆ ಮತ್ತು ಜಾನುವಾರುಗಳ ದುಃಸ್ಥಿತಿ : ಜಾನುವಾರುಗಳಿಗೆ ಮೇವಿನ ತೊಂದರೆಯಾಗಿತ್ತು

೯. ಸರ್ಕಾರ ಮತ್ತು ಪ್ರವಾಹದ ಪರಿಹಾರಗಳು : ಅಲ್ಪ ಪ್ರಮಾಣದಲ್ಲಿ ಪರಿಹಾರ ದೊರಕಿದೆ.

*ಬೆಳೆನಷ್ಟ ಹಾಗೂ ಪರಿಹಾರ : ಅಲ್ಪ ಪ್ರಮಾಣದಲ್ಲಿ, ೪ ಎಕರೆಗೆ ಸೂರ್ಯಕಾಂತಿ ಬೀಜಕ್ಕೆ ೬೫೦೦ ರಿಂದ ೭೦೦೦ ರೂಪಾಯಿ ಖರ್ಚಾದರೆ ಸರ್ಕಾರದಿಂದ ೮೦೦ ರಿಂದ ೯೦೦ ರೂಪಾಯಿ ಮಾತ್ರ ಪರಿಹಾರ ಸಿಕ್ಕಿದೆ. ಇದರಿಂದ ಆರ್ಥಿಕ ತೊಂದರೆಯಾಗಿತ್ತು.

*ವಸತಿ ನಿರ್ಮಾಣ : ಸಮಸ್ಯೆ ಕಂಡುಬಂದಿಲ್ಲ

*ಶೈಕ್ಷಣಕ ಪ್ರಗತಿಯ ಅಂಶಗಳು : ಸಮಸ್ಯೆ ಕಂಡುಬಂದಿಲ್ಲ

*ಸರ್ಕಾರೇತರ ಸಂಸ್ಥೆಗಳ ಪಾತ್ರ : ಇಲ್ಲಾ

*ಎನ್.ಜಿ.ಓ.ಗಳ ಪಾತ್ರ : ಇಲ್ಲಾ

(ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ)

| | | |
|---|---|---|
| ೧೦. ಪ್ರಸ್ತುತ ಇಂದಿನ ಸ್ಥಿತಿ ಗತಿ | : | ನಮ್ಮೂರಿನ ಜನರು ಪ್ರಸ್ತುತ ವಲಸೆ ಪ್ರಮಾಣ ಹೆಚ್ಚಾಗಿ ಕಂಡುಬರುತ್ತದೆ. |
| *ಹಣ ದೊರಕಿದೆಯೇ | : | ಹಣ ದೊರಕಿದೆ. |
| *ಯಾವ ಪ್ರಮಾಣದಲ್ಲಿ ದೊರಕಿದೆ | : | ಅಲ್ಪ ಪ್ರಮಾಣದಲ್ಲಿ |
| ೧೧. ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಜಾತಿವಾರು ತಾರತಮ್ಯ ನಡೆದಿರುವುದೇ? | : | ಜಾತಿವಾರು ತಾರತಮ್ಯ ನಡೆದಿರಬಹುದು. ನಮಗೆ ಸರಿಯಾಗಿ ಗೊತ್ತಿಲ್ಲ. |
| ೧೨. ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಸಂಘ ಸಂಸ್ಥೆಗಳ ಪಾತ್ರ | : | ಇಲ್ಲಾ. |

ಸಂದರ್ಶನದ ದಿನಾಂಕ ೧೨.೨.೦೭

೪

| | | |
|---|---|---|
| ಜಿಲ್ಲೆ | : | ರಾಯಚೂರು |
| ತಾಲ್ಲೂಕು | : | ದೇವದುರ್ಗ |
| ಹೋಬಳಿ | : | ದೇವದುರ್ಗ |
| ಊರು | : | ಗೋಪಾಳಪುರ |
| ೧. ಹೆಸರು | : | ರವೀಂದ್ರನಾಯಕ್ |
| ೨. ವಯಸ್ಸು | : | ೩೧ |
| ೩. ಸಾಂಸಾರಿಕ ಜೀವನ>ಕುಟುಂಬ ವ್ಯವಸ್ಥೆ (ಮಕ್ಕಳು ಇತ್ಯಾದಿ) | : | ಅವಿಭಕ್ತ ಕುಟುಂಬ. ೫ ಜನ ಸದಸ್ಯರು. |
| ೪. ಧರ್ಮ ಮತ್ತು ಜಾತಿ | : | ಬೇಡರ (ನಾಯಕ) |
| ೫. ಹಿಂದೆ ಪ್ರವಾಹವಾಗಿದ್ದಾಗ ವರ್ಷಗಳ ನೆನಪು | : | ೨೫ ವರ್ಷಗಳ ಹಿಂದೆ ಪ್ರವಾಹದ ಭೀಕರತೆ ಜನರಲ್ಲಿ ಭೀತಿಯನ್ನು ಉಂಟುಮಾಡಿತ್ತು ಎಂದು ನಮ್ಮ ಹಿರಿಯರು ಹೇಳುತ್ತಾರೆ. |
| ೬. ೨೦೦೫-೦೬ರ ಪ್ರವಾಹ ದಿನಗಳ ಅನುಭವ | : | ೨೦೦೫–೦೬ರಲ್ಲಿಯೂ ಸಹ ಹೆಚ್ಚಿನ ಪ್ರವಾಹ ಬಂದು, ನೀರೆಲ್ಲಾ ಊರಲ್ಲಿ ನುಗ್ಗಿ ಬಂದು ಜನರು ಅನೇಕ ತೊಂದರೆಗೀಡಾಗಿದ್ದರು ಕೃಷಿ ಭೂಮಿ ಹೆಚ್ಚು ನಾಶವಾಗಿತ್ತು. |
| ೭. ಜಿಲ್ಲಾಡಳಿತ ವಹಿಸಿದ ಕ್ರಮಗಳು | : | ಜಿಲ್ಲಾಡಳಿತ ಕ್ರಮ ಕೆಲವೊಂದು ವಿಷಯಗಳಲ್ಲಿ ಬೇಜವಾಬ್ಧಾರಿ ವಹಿಸಿತ್ತು. |
| *ಆಹಾರ ಮತ್ತು ಕುಡಿಯುವ ನೀರಿನ ವ್ಯವಸ್ಥೆ | : | ಸ್ವಲ್ಪ ಪ್ರಮಾಣದಲ್ಲಿ ಕಂಡುಬಂದರೂ, ಅಷ್ಟೇನು ತೊಂದರೆಯಾಗಿಲ್ಲ. |
| *ವದ್ದಿಕೆ | : | ಇಲ್ಲಾ |
| *ತಾತ್ಕಾಲಿಕ ವಸತಿ | : | ಸಮಸ್ಯೆ ಕಂಡುಬಂದಿಲ್ಲ |

| | | | |
|---|---|---|---|
| | *ಬಟ್ಟೆ | : | ಸಮಸ್ಯೆ ಕಂಡುಬಂದಿಲ್ಲ |
| | *ಜಾನವಾರುಗಳಿಗೆ ಮೇವು | : | ಮೇವಿನ ಸಮಸ್ಯೆಯಾಗಿತ್ತು. |
| | *ಆರೋಗ್ಯ ತಪಾಸಣೆ | : | ಸಮಸ್ಯೆ ಕಂಡುಬಂದಿಲ್ಲ |
| ೮. | ಪ್ರವಾಹದಿಂದ ಉಂಟಾದ ತೊಂದರೆಗಳ ಬಗ್ಗೆ | : | ಯಾವ ತೊಂದರೆ ಕಂಡುಬರದಿದ್ದರೂ, ೧೨೫ ಎಕರೆಯಲ್ಲಿ ಬೆಳೆದ ಸೂರ್ಯಕಾಂತಿ ಬೆಳೆಯು ನಾಶವಾಗಿ ಫಸಲಿಗೆ ಹಾಕಿದ ಹಣ ಎಲ್ಲಾ ನೀರು ಪಾಲಾಯಿತು. |
| | *ಆರ್ಥಿಕ ದುಸ್ಥಿತಿ | : | ಇದರಿಂದ ಆರ್ಥಿಕ ತೊಂದರೆಯಾಗಿತ್ತು. |
| | *ಶೈಕ್ಷಣಿಕ ಸಮಸ್ಯೆ | : | ನಮ್ಮ ಗ್ರಾಮದ ಜನ ಕೂಲಿ ಕೆಲಸ ಮಾಡೋರು ಇಂತಹ ಪ್ರವಾಹ ಬಂದಾಗ ಓದುವ ಮಕ್ಕಳಿಗೆ ದುಡ್ಡು ಕಳಿಸಲು ಆಗುವುದಿಲ್ಲ. ಆದರೆ ಶೈಕ್ಷಣಿಕ ಸಮಸ್ಯೆಯಾಗಿತ್ತು. |
| | *ಮನೆ ಮತ್ತು ಜಾನುವಾರುಗಳ ದುಃಸ್ಥಿತಿ | : | ಜಾನುವಾರುಗಳಿಗೆ ಮೇವಿನ ತೊಂದರೆಯಾಗಿತ್ತು. |
| ೯. | ಸರ್ಕಾರ ಮತ್ತು ಪ್ರವಾಹದ ಪರಿಹಾರಗಳು | : | ಸರಕಾರದಿಂದ ಪರಿಹಾರ ಸ್ವಲ್ಪ ಮಟ್ಟಿಗೆ ನೀಡಿದ್ದಾರೆ. |
| | *ಬೆಳೆನಷ್ಟ ಹಾಗೂ ಪರಿಹಾರ | : | ೫ ಎಕರೆಗೆ ೨೦,೦೦೦ ರೂಪಾಯಿ ನಾವು ಖರ್ಚು ಮಾಡಿದ್ದರೆ, ಸರಕಾರದವರು ೧ ಎಕರೆಗೆ ೮೦೦ ರೂಪಾಯಿಯಂತೆ ಪರಿಹಾರ ನೀಡಿದ್ದಾರೆ. ರೈತರಿಗೆ ತೃಪ್ತಿ ಇಲ್ಲ. |
| | *ವಸತಿ ನಿರ್ಮಾಣ | : | ಸಮಸ್ಯೆ ಕಂಡುಬಂದಿಲ್ಲ |
| | *ಶೈಕ್ಷಣಕ ಪ್ರಗತಿಯ ಅಂಶಗಳು | : | ಸಮಸ್ಯೆ ಕಂಡುಬಂದಿಲ್ಲ |
| | *ಸರ್ಕಾರೇತರ ಸಂಸ್ಥೆಗಳ ಪಾತ್ರ | : | ಇದರ ಪಾತ್ರ ಇಲ್ಲಾ |
| | *ಎನ್.ಜಿ.ಓ.ಗಳ ಪಾತ್ರ (ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ) | : | ಇಲ್ಲಾ |

| | | |
|---|---|---|
| ೧೦. ಪ್ರಸ್ತುತ ಇಂದಿನ ಸ್ಥಿತಿ ಗತಿ | : | ಈ ಹಳ್ಳಿ ಪ್ರಸ್ತುತ ಇಂದಿನ ಸ್ಥಿತಿ–ಗತಿ ಶೋಚನೀಯವಾಗುತ್ತದೆ. |
| *ಹಣ ದೊರಕಿದೆಯೇ | : | ಹಣ ದೊರಕಿದೆ. |
| *ಯಾವ ಪ್ರಮಾಣದಲ್ಲಿ ದೊರಕಿದೆ | : | ಅಲ್ಪ ಪ್ರಮಾಣದಲ್ಲಿ ದೊರಕಿದೆ. |
| ೧೧. ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಜಾತಿವಾರು ತಾರತಮ್ಯ ನಡೆದಿರುವುದೇ? | : | ಜಾತಿವಾರು ತಾರತಮ್ಯ. ನಡೆದಿರಬಹುದು. ಸ್ಪಷ್ಟವಾಗಿ ನಮಗೆ ಗೊತ್ತಿಲ್ಲ. |
| ೧೨. ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಸಂಘ ಸಂಸ್ಥೆಗಳ ಪಾತ್ರ | : | ಯಾವ ಸಂಘ ಸಂಸ್ಥೆಗಳು ಪಾತ್ರ ವಹಿಸಿಲ್ಲ. |

ಸಂದರ್ಶನದ ದಿನಾಂಕ ೧೫.೨.೦೭

ಜಿಲ್ಲೆ : ರಾಯಚೂರು

ತಾಲ್ಲೂಕು : ದೇವದುರ್ಗ

ಹೋಬಳಿ : ಗೊಬ್ಬೂರು

ಊರು : ಹೀರೆರಾಯಕುಂಪಿ

೧. ಹೆಸರು : ಶರಣಬಸವ

೨. ವಯಸ್ಸು : ೨೬

೩. ಸಾಂಸಾರಿಕ ಜೀವನ>ಕುಟುಂಬ ವ್ಯವಸ್ಥೆ (ಮಕ್ಕಳು ಇತ್ಯಾದಿ) : ಅವಿಭಕ್ತ ಕುಟುಂಬ

೪. ಧರ್ಮ ಮತ್ತು ಜಾತಿ : ಪರಿಶಿಷ್ಟ ಜಾತಿ, (ಚಲುವಾದಿ)

೫. ಹಿಂದೆ ಪ್ರವಾಹವಾಗಿದ್ದಾಗ ವರ್ಷಗಳ ನೆನಪು : ಹಿಂದೆ ಪ್ರವಾಹವಾಗಿದ್ದಾಗ, ತುಂಬಾ ಕಷ್ಟ ಅನುಭವಿಸಿದ್ದರು ಎಂದು ನಮ್ಮ ಹಿರಿಯರು ಹೇಳುತ್ತಾರೆ.

೬. ೨೦೦೫-೦೬ರ ಪ್ರವಾಹ ದಿನಗಳ ಅನುಭವ: ಪ್ರವಾಹ ಬಂದಾಗ ನಮ್ಮ ಹಳ್ಳಿಯಲ್ಲಿ ಅಷ್ಟೇನು ತೊಂದರೆಯಾಗಿಲ್ಲ. ಏಕೆಂದರೆ ಹೊಳೆ ದಂಡಿಯಲ್ಲಿದ್ದ ಹೊಲಗಳಿಗೆ ಮಾತ್ರ ನೀರು ನುಗ್ಗಿ ಬೆಳೆ ನಾಶವಾಗಿತ್ತು. ಊರಿನೊಳಗೆ ಪ್ರವಾಹ ಬಂದಿಲ್ಲ.

೭. ಜಿಲ್ಲಾಡಳಿತ ವಹಿಸಿದ ಕ್ರಮಗಳು : ಕೆಲವೊಂದು ಕ್ರಮಗಳನ್ನು ವಹಿಸಿದ್ದರು. ನಮ್ಮೂರಿಗೆ ಪ್ರಯೋಜನವಾಗಿಲ್ಲ.

*ಆಹಾರ ಮತ್ತು ಕುಡಿಯುವ ನೀರಿನ ವ್ಯವಸ್ಥೆ: ನಮ್ಮ ಹಳ್ಳಿಯಲ್ಲಿ ಜನಸಂಖ್ಯೆ ಸ್ವಲ್ಪ ಜಾಸ್ತಿ ಇದೆ. ಪ್ರವಾಹ ಬಂದಾಗ ಹೊಳೆ ಸಮೀಪ ಇರುವ ಕೆಲವೊಂದು ಬೋರಿಂಗ್‌ಗಳು ಮುಳುಗಿ ಹೋದಾಗ ನೀರಿನ ಸಮಸ್ಯೆಯಾಗಿತ್ತು.

*ವದ್ದಿಕೆ : ಸಮಸ್ಯೆ ಕಂಡುಬಂದಿಲ್ಲ

| | | | |
|---|---|---|---|
| | *ತಾತ್ಕಾಲಿಕ ವಲತಿ | : | ಸಮಸ್ಯೆ ಕಂಡುಬಂದಿಲ್ಲ. |
| | *ಬಟ್ಟೆ | : | ಸಮಸ್ಯೆ ಕಂಡುಬಂದಿಲ್ಲ |
| | *ಜಾನವಾರುಗಳಿಗೆ ಮೇವು | : | ಕಾಳಜಿ ಮಾಡಿಲ್ಲ. |
| | *ಆರೋಗ್ಯ ತಪಾಸಣೆ | : | ನಮ್ಮೂರಿನಲ್ಲಿ ಆರೋಗ್ಯ ಕೇಂದ್ರಗಳಿಲ್ಲ. ಕಾಯಿಲೆಗಳಿಗೆ ತುತ್ತಾದವರು ೨೫ ಕಿ.ಮೀ. ದೂರದವರೆಗೆ ಹೋಗಿ ತೋರಿಸಿಕೊಂಡು ಬರಬೇಕು. ಸರಿಯಾದ ಬಸ್ಸಿನ ವ್ಯವಸ್ಥೆ ಇಲ್ಲ. ಇದರ ಅನಾನುಕೂಲತೆಯಿಂದ ಕೆಲವೊಂದು ಸಾವುಗಳು ಸಹ ಸಂಭವಿಸಿವೆ. |
| ೮. | ಪ್ರವಾಹದಿಂದ ಉಂಟಾದ ತೊಂದರೆಗಳ ಬಗ್ಗೆ | : | ಪ್ರವಾಹದಿಂದ ಸ್ವಲ್ಪ ಪ್ರಮಾಣ ತೊಂದರೆಗಳಾಗಿವೆ. |
| | *ಅರ್ಥಿಕ ದುಸ್ಥಿತಿ | : | ಬೆಳೆ ನಷ್ಟವಾಗಿ ಆರ್ಥಿಕ ಮುಗ್ಗಟ್ಟು ತುಂಬಾ ಸಂಭವಿಸಿದೆ. |
| | *ಶೈಕ್ಷಣಿಕ ಸಮಸ್ಯೆ | : | ಇದೆ. ಆದರೂ ಯಾರು ಕಾಳಜಿ ವಹಿಸಿಲ್ಲ. |
| | *ಮನೆ ಮತ್ತು ಜಾನುವಾರುಗಳ ದುಸ್ಥಿತಿ | : | ಜಾನುವಾರುಗಳಿಗೆ ಮೇವಿನ ತೊಂದರೆಯಾಗಿತ್ತು. |
| ೯. | ಸರ್ಕಾರ ಮತ್ತು ಪ್ರವಾಹದ ಪರಿಹಾರಗಳು | : | ಸ್ವಲ್ಪ ಪ್ರಮಾಣದಲ್ಲಿ ಪರಿಹಾರಧನ ದೊರಕಿದೆ. |
| | *ಬೆಳೆ ನಷ್ಟ ಹಾಗೂ ಪರಿಹಾರ | : | ಬೆಳೆ ನಷ್ಟವಾದಾಗ ಬೆಳೆಯ ಪರಿಹಾರ ಧನವನ್ನು ಕೇವಲ ೧ ಎಕರೆಗೆ ೮೦೦ ರೂಪಾಯಿಯಂತೆ ಕೊಟ್ಟಿದ್ದಾರೆ. |
| | *ವಸತಿ ನಿರ್ಮಾಣ | : | ಸಮಸ್ಯೆ ಕಂಡುಬಂದಿಲ್ಲ. |
| | *ಶೈಕ್ಷಣಕ ಪ್ರಗತಿಯ ಅಂಶಗಳು | : | ಶೈಕ್ಷಣಿಕವಾಗಿ ಅಷ್ಟೇನು ತೊಂದರೆಗಳಾಗಿಲ್ಲ. |

*ಸರ್ಕಾರೇತರ ಸಂಸ್ಥೆಗಳ ಪಾತ್ರ : ಇಲ್ಲಾ

*ಎನ್.ಜಿ.ಓ.ಗಳ ಪಾತ್ರ : ಏನು ಸಹಾಯ ಮಾಡಿಲ್ಲ.

(ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ)

೧೦. ಪ್ರಸ್ತುತ ಇಂದಿನ ಸ್ಥಿತಿಗತಿ : ಜನರು ತಮ್ಮ ಬದುಕಿಗೆ ಆಸರೆಯಾದ ದುಡಿಮೆಯನ್ನು ಹುಡುಕಿಕೊಂಡು ಬೇರೆ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಹಳ್ಳಿಯಲ್ಲಿ ಈಗ ಯಥಾಸ್ಥಿತಿ ಉಂಟು.

*ಹಣ ದೊರಕಿದೆಯೇ : ಹಣ ದೊರಕಿದೆ.

*ಯಾವ ಪ್ರಮಾಣದಲ್ಲಿ ದೊರಕಿದೆ : ೧ ಎಕರೆಗೆ ೮೦೦ ರೂಪಾಯಿಯಂತೆ ಪರಿಹಾರಧನ ದೊರಕಿದೆ.

೧೧. ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಜಾತಿವಾರು ತಾರತಮ್ಯ ನಡೆದಿರುವುದೇ? : ಇಲ್ಲಾ

೧೨. ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಸಂಘ ಸಂಸ್ಥೆಗಳ ಪಾತ್ರ : ನಿರ್ವಹಿಸಿರುವುದಿಲ್ಲ

ಸಂದರ್ಶನದ ದಿನಾಂಕ ೧೮.೨.೦೭

ಜಿಲ್ಲೆ : ರಾಯಚೂರು

ತಾಲ್ಲೂಕು : ದೇವದುರ್ಗ

ಹೋಬಳಿ : ಜಾಲಹಳ್ಳಿ

ಊರು : ಚಿಂಚೋಡಿ

೧. ಹೆಸರು : ಶವುಂಡಪ್ಪ

೨. ವಯಸ್ಸು : ೩೫

೩. ಸಾಂಸಾರಿಕ ಜೀವನ>ಕುಟುಂಬ ವ್ಯವಸ್ಥೆ (ಮಕ್ಕಳು ಇತ್ಯಾದಿ) : ೫ ಜನ ಸದಸ್ಯರು

೪. ಧರ್ಮ ಮತ್ತು ಜಾತಿ : ಪರಿಶಿಷ್ಟ ಪಂಗಡ, ನಾಯಕ

೫. ಹಿಂದೆ ಪ್ರವಾಹವಾಗಿದ್ದಾಗ ವರ್ಷಗಳ ನೆನಪು : ಹಿಂದೆ ಪ್ರವಾಹವಾಗಿದ್ದಾಗ, ರೈತರಿಗೆ ಬಹಳ ಅನಾನುಕೂಲತೆಯಾಗಿದ್ದಲ್ಲದೇ ಪ್ರವಾಹ ಭಯಂಕರವಾಗಿತ್ತು.

೬. ೨೦೦೫-೦೬ರ ಪ್ರವಾಹ ದಿನಗಳ ಅನುಭವ : ಈ ಪ್ರವಾಹ ತುಂಬಾ ಹಾನಿಯನ್ನು ಮಾಡಿದೆ. ಕೆಲವು ಜಮೀನುಗಳಲ್ಲಿ ನಡುಗಡ್ಡೆಗಳಾಗಿದ್ದು, ಇಲ್ಲಿನ ಫಸಲು ಎಲ್ಲಾ ಮುಳುಗಿ, ಎಲ್ಲಾ ಬೆಳೆ ನಾಶವಾಗಿದೆ.

೭. ಜಿಲ್ಲಾಡಳಿತ ವಹಿಸಿದ ಕ್ರಮಗಳು : ಯಾವ ಸೌಕರ್ಯ ಒದಗಿಸಿಲ್ಲ.

*ಆಹಾರ ಮತ್ತು ಕುಡಿಯುವ ನೀರಿನ ವ್ಯವಸ್ಥೆ: ನಮ್ಮ ಹಳ್ಳಿಗೆ ನೀರು ಒದಗಿಸಿಲ್ಲ. ಹರಿಯುವ ನೀರನ್ನು ಕುಡಿದವು.

*ವದ್ದಿಕೆ : ಸಮಸ್ಯೆ ಕಂಡುಬಂದಿಲ್ಲ

*ತಾತ್ಕಾಲಿಕ ವಸತಿ : ಸಮಸ್ಯೆ ಕಂಡುಬಂದಿಲ್ಲ

*ಬಟ್ಟೆ : ಸಮಸ್ಯೆ ಕಂಡುಬಂದಿಲ್ಲ

*ಜಾನವಾರುಗಳಿಗೆ ಮೇವು : ಒದಗಿಸಿಲ್ಲ.

| | | | |
|---|---|---|---|
| | *ಆರೋಗ್ಯ ತಪಾಸಣೆ | : | ಸಮಸ್ಯೆ ಕಂಡುಬಂದಿಲ್ಲ |
| ೮. | ಪ್ರವಾಹದಿಂದ ಉಂಟಾದ ತೊಂದರೆಗಳ ಬಗ್ಗೆ | : | ಪ್ರವಾಹದಿಂದ ಅನೇಕ ತೊಂದರೆಗಳು ಉಂಟಾಗಿತ್ತು. |
| | *ಅರ್ಥಿಕ ದುಃಸ್ಥಿತಿ | : | ಬೆಳೆ ನಷ್ಟವಾದ್ದರಿಂದ ನಮ್ಮೂರಿನಲ್ಲಿ ಜನರು ಆರ್ಥಿಕವಾಗಿ ತುಂಬಾ ತೊಂದರೆ ಅನುಭವಿಸಿದರು. ಇಲ್ಲಿನ ರೈತರು ಒಂದು ಬೆಳೆಗೆ ೧೫ ರಿಂದ ೨೦ ಸಾವಿರ ಲಾಭ ಆಗುವುದು ಅಂದುಕೊಂಡವರಿಗೆ ಈ ಪ್ರವಾಹ ಅವರ ಕನಸನ್ನು ನುಚ್ಚು ನೂರು ಮಾಡಿತು. ಸರ್ಕಾರ ೧ ಎಕರೆಗೆ ೮೦೦ರೂ ಪರಿಹಾರ ಕೊಟ್ಟಿದೆ. ಈ ಹಣ ರೈತರು ತಂದ ಬೀಜ ಗೊಬ್ಬರಕ್ಕೆ ಸಹಿತ ಸರಿ ಹೊಂದುವುದಿಲ್ಲ. ಹೀಗಾದಾಗ ಹೇಗೆ ಸ್ಥಿತಿವಂತರಾಗಲು ಸಾಧ್ಯ ನೀವೇ ಹೇಳಿ? |
| | *ಶೈಕ್ಷಣಿಕ ಸಮಸ್ಯೆ | : | ಶೈಕ್ಷಣಿಕ ಸಮಸ್ಯೆ ಇದೆ. |
| | *ಮನೆ ಮತ್ತು ಜಾನುವಾರುಗಳ ದುಸ್ಥಿತಿ | : | ದನಕರುಗಳಿಗೆ ಮೇವಿನ ತೊಂದರೆಯಾಗಿತ್ತು. |
| ೯. | ಸರ್ಕಾರ ಮತ್ತು ಪ್ರವಾಹದ ಪರಿಹಾರಗಳು | : | ಸರ್ಕಾರ ಅಷ್ಟೇನು ಪರಿಹಾರ ಒದಗಿಸಿಲ್ಲ. |
| | *ಬೆಳೆ ನಷ್ಟ ಹಾಗೂ ಪರಿಹಾರ | : | ಬೆಳೆನಷ್ಟದ ಪರಿಹಾರ ತೃಪ್ತಿಕರವಾಗಿಲ್ಲ. ಬೆಳೆನಷ್ಟ ಆಗಿರುವವರಿಗೆ ಪರಿಹಾರ ಸಿಕ್ಕಿಲ್ಲ. ಬೆಳೆನಷ್ಟ ಆಗಲಾರದವರಿಗೆ ಪರಿಹಾರ ದೊರಕಿದೆ. ಹೀಗಾಗಿ ಜನರು ಅಸಮಾಧಾನದಿಂದಿದ್ದಾರೆ. |
| | *ವಸತಿ ನಿರ್ಮಾಣ | : | ಸಮಸ್ಯೆ ಕಂಡುಬಂದಿಲ್ಲ |
| | *ಶೈಕ್ಷಣಿಕ ಪ್ರಗತಿಯ ಅಂಶಗಳು | : | ಸಮಸ್ಯೆ ಕಂಡುಬಂದಿಲ್ಲ |

| | | |
|---|---|---|
| *ಸರ್ಕಾರೇತರ ಸಂಸ್ಥೆಗಳ ಪಾತ್ರ | : | ಇಲ್ಲಾ |
| *ಎನ್.ಜಿ.ಓ.ಗಳ ಪಾತ್ರ (ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ) | : | ಇಲ್ಲಾ |
| ೧೦. ಪ್ರಸ್ತುತ ಇಂದಿನ ಸ್ಥಿತಿ ಗತಿ | : | ನಮ್ಮೂರಿನಲ್ಲಿ ವಲಸೆ ಹೋಗುವುದು ಹೆಚ್ಚು ಕಂಡುಬರುತ್ತದೆ. |
| *ಹಣ ದೊರಕಿದೆಯೇ | : | ಕೆಲವರಿಗೆ ದೊರಕಿದೆ. |
| *ಯಾವ ಪ್ರಮಾಣದಲ್ಲಿ ದೊರಕಿದೆ | : | ಅಲ್ಪ ಪ್ರಮಾಣದ |
| ೧೧. ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಜಾತಿವಾರು ತಾರತಮ್ಯ ನಡೆದಿರುವುದೇ? | : | ಜಾತಿವಾರು ತಾರತಮ್ಯ ತುಂಬಾ ಇದೆ. ದುರ್ಬಲರಿಗೆ ಯಾವ ಪರಿಹಾರ ಸೌಲಭ್ಯ ದೊರಕಿಲ್ಲ. ಪ್ರಬಲರು ಹೆಚ್ಚಿನ ಸೌಲಭ್ಯ ಪಡೆದಿದ್ದಾರೆ. |
| ೧೨. ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಸಂಘ ಸಂಸ್ಥೆಗಳ ಪಾತ್ರ | : | ಈ ಸಂಸ್ಥೆಗಳೇ ತುಂಬಾ ಅಧೋಗತಿಯನ್ನು ಹೊಂದುತ್ತಿವೆ. ಇನ್ನೂ ನಮ್ಮಂತಹ ಹಳ್ಳಿಯವರಿಗೆ ಯಾವಾಗ ಸಹಾಯ ಮಾಡುತ್ತಾರೆ. ಖಂಡಿತಾ ಸಹಾಯ ಮಾಡಿಲ್ಲ. |

ಸಂದರ್ಶನದ ದಿನಾಂಕ ೨೦.೨.೦೭

| | | |
|---|---|---|
| ಜಿಲ್ಲೆ | : | ರಾಯಚೂರು |
| ತಾಲ್ಲೂಕು | : | ದೇವದುರ್ಗ |
| ಹೋಬಳಿ | : | ದೇವದುರ್ಗ |
| ಊರು | : | ನೀಲವಂಜಿ |
| ೧. ಹೆಸರು | : | ಲಿಂಗಣ್ಣ ಗೌಡೂರು |
| ೨. ವಯಸ್ಸು | : | ೩೦ |
| ೩. ಸಾಂಸಾರಿಕ ಜೀವನ>ಕುಟುಂಬ ವ್ಯವಸ್ಥೆ (ಮಕ್ಕಳು ಇತ್ಯಾದಿ) | : | ೧೦ ಜನ ಸದಸ್ಯರು, ಅವಿಭಕ್ತ ಕುಟುಂಬ |
| ೪. ಧರ್ಮ ಮತ್ತು ಜಾತಿ | : | ಕುರುಬರು |
| ೫. ಹಿಂದೆ ಪ್ರವಾಹವಾಗಿದ್ದಾಗ ವರ್ಷಗಳ ನೆನಪು | : | ಸುಮಾರು ವರ್ಷಗಳಿಂದ ಈ ತರಹದ ಪ್ರವಾಹ ಬರುತ್ತಿರುವುದು ಇದು ಮೂರನೇ ಸಲ. ಈ ಪ್ರವಾಹದಿಂದ ೪೦೦ ರಿಂದ ೫೦೦ ಎಕರೆ ಭೂಮಿ ಮುಳುಗಿ ಹೋಗಿತ್ತು. ಇತ್ತೀಚೆಗೆ ೪ ಎಕರೆಯಲ್ಲಿ ಜೋಳ, ಹೆಸರು, ಸೂರ್ಯಕಾಂತಿ ಮತ್ತು ದ್ರಾಕ್ಷಿಯನ್ನು ಸಹ ಇಲ್ಲಿ ಬೆಳೆದಿದ್ದೆವು. ಈ ಬೆಳೆಗಳೆಲ್ಲವು ಸಂಪೂರ್ಣವಾಗಿ ನೀರಿನಲ್ಲಿ ಮುಳುಗಿ ಹೋದವು. |
| ೬. ೨೦೦೫-೦೬ರ ಪ್ರವಾಹ ದಿನಗಳ ಅನುಭವ | : | ನಮ್ಮದು ೪೦ ಎಕರೆ ಜಮೀನು ನೀರಿನಲ್ಲಿ ಮುಳುಗಿತ್ತು. ಈ ಪ್ರವಾಹದಿಂದ ನಮ್ಮಲ್ಲಿ ಬೆಳೆಗಳೆಲ್ಲವು ಸಂಪೂರ್ಣ ನೀರಿನಲ್ಲಿ ಮುಳುಗಿ ಹೋಗಿ ಜನರು ತುಂಬಾ ತೊಂದರೆ ಅನುಭವಿಸಿದರು. |

| | | | |
|---|---|---|---|
| ೭. | ಜಿಲ್ಲಾಡಳಿತ ವಹಿಸಿದ ಕ್ರಮಗಳು | : | ಯಾವ ಕ್ರಮ ವಹಿಸಿಲ್ಲ. |
| | *ಆಹಾರ ಮತ್ತು ಕುಡಿಯುವ ನೀರಿನ ವ್ಯವಸ್ಥೆ | : | ನಮ್ಮ ಊರಿನಲ್ಲಿ ಬೋರಿಂಗ್‌ಗಳು ಇರೋದರಿಂದ ಕುಡಿಯುವ ನೀರಿನ ಸಮಸ್ಯೆ ಇಲ್ಲ. |
| | *ವದ್ದಿಕೆ | : | ಸಮಸ್ಯೆ ಕಂಡುಬಂದಿಲ್ಲ |
| | *ತಾತ್ಕಾಲಿಕ ವಸತಿ | : | ಸಮಸ್ಯೆ ಕಂಡುಬಂದಿಲ್ಲ |
| | *ಬಟ್ಟೆ | : | ಸಮಸ್ಯೆ ಕಂಡುಬಂದಿಲ್ಲ |
| | *ಜಾನವಾರುಗಳಿಗೆ ಮೇವು | : | ಮೇವಿನ ತೊಂದರೆಯಾಗಿತ್ತು. ಬೇಸಿಗೆಯಲ್ಲಿ ಮೇವಿಗೆ ತುಂಬಾ ತೊಂದರೆಯಾಗುವುದು. |
| | *ಆರೋಗ್ಯ ತಪಾಸಣೆ | : | ಪಕ್ಕದ ಊರು ಹೇರುಂಡಿಯಿಂದ ಮಲೇರಿಯಾ ಡಾಕ್ಟರ್‌ಗಳು ಮತ್ತು ನರ್ಸ್‌ಗಳು ನಮ್ಮೂರಿಗೆ ಬಂದು, ಆರೋಗ್ಯ ತಪಾಸಣೆ ಮಾಡುತ್ತಾರೆ. |
| ೮. | ಪ್ರವಾಹದಿಂದ ಉಂಟಾದ ತೊಂದರೆಗಳ ಬಗ್ಗೆ | : | ಈ ಪ್ರವಾಹದಿಂದ ರೈತರಿಗೆ ತುಂಬಾ ತೊಂದರೆಗಳಾಗಿದ್ದವು. |
| | *ಅರ್ಥಿಕ ದುಃಸ್ಥಿತಿ | : | ರೈತರು ಬೆಳೆದ ಎಲ್ಲಾ ಬೆಳೆಗಳು ನಾಶವಾಗಿ, ಒಟ್ಟು ೨೫ ಲಕ್ಷ ರೂಪಾಯಿಯಷ್ಟು ಬೆಳೆಹಾನಿ ಸಂಭವಿಸಿದೆ. ಈ ರೀತಿ ಹಾನಿಯನ್ನು ಅನುಭವಿಸಿದ ರೈತರು ಆರ್ಥಿಕವಾಗಿ ಹೇಗೆ ಸ್ಥಿತಿವಂತರಾಗಲು ಸಾಧ್ಯ. ಆರ್ಥಿಕ ತೊಂದರೆ ಅನುಭವಿಸಿದರು. |
| | *ಶೈಕ್ಷಣಿಕ ಸಮಸ್ಯೆ | : | ನಮ್ಮೂರಿನಲ್ಲಿ ಶಿಕ್ಷಣದ ಬಗ್ಗೆ ದೊಡ್ಡ ಸಮಸ್ಯೆಯೇ ಇದೇ. ಈ ಊರಿನ ಹುಡುಗರು, ಮಾರ್ಕಂಡಯ್ಯ, ತಂದೆ |

ಮಲ್ಲಿಕಾರ್ಜುನ, ಮಾಳಪ್ಪ ತಂದೆ ಲಿಂಗಪ್ಪ ಹೀಗೆ ಸುಮಾರು ೮ ಜನ ಹುಡುಗರು, ಬೆಳಿಗ್ಗೆ ೬ ಗಂಟೆಗೆ ಶಾಲೆಗೆ ಹೋರಡುತ್ತಾರೆ. ಈ ಊರು ನಿಲವಂಜಿಗೆ ಸಮೀಪ ಹೇರುಂಡಿ ಕ್ರಾಸ್ ೨ ಕಿ.ಮೀ. ಹಾಗೇ ಸುತ್ತುವರೆದು ಹೋಗೋಕೆ ೧೦ ಕಿ.ಮೀ. ಆಗುತ್ತದೆ. ಸಂಜೆ ೭. ಗಂಟೆಗೆ ಮನೆಗೆ ಬರುತ್ತಾರೆ. ಹೀಗೆ ಪ್ರವಾಹದಿಂದ ಶಾಲಾ ಮಕ್ಕಳು ಸುತ್ತುವರೆದುಕೊಂಡು ಹೋಗಲು ತುಂಬಾ ಪರದಾಡುತ್ತಾರೆ.

*ಮನೆ ಮತ್ತು ಜಾನುವಾರುಗಳ ದುಃಸ್ಥಿತಿ : ಜಾನುವಾರುಗಳಿಗೆ ಮೇವಿನ ತೊಂದರೆಯಾಗಿತ್ತು. ಆದರೆ, ಯಾರು ಸಹಾಯ ಮಾಡಿಲ್ಲ.

೯. ಸರ್ಕಾರ ಮತ್ತು ಪ್ರವಾಹದ ಪರಿಹಾರಗಳು : ಸರ್ಕಾರ ನಮ್ಮೂರಿಗೆ ಯಾವ ಪರಿಹಾರವನ್ನು ನೀಡಿಲ್ಲ.

*ಬೆಳೆನಷ್ಟ ಹಾಗೂ ಪರಿಹಾರ : ನಮ್ಮದೇ ೪ ಎಕರೆ ಭೂಮಿಯಲ್ಲಿ ದ್ರಾಕ್ಷಿಯನ್ನು ಹಾಕಿದ್ದೆವು. ೫ ಅಡಿ ಎತ್ತರ ಬೆಳೆದ ದ್ರಾಕ್ಷಿ ಪ್ರವಾಹದಿಂದ ನೀರು ಪಾಲಾಯಿತು. ಇನ್ನೂ ಊರಿನ ೪೦೦ ಎಕರೆ ಭೂಮಿಯ ಎಲ್ಲಾ ಬೆಳೆಗಳು ನೀರಿನಲ್ಲಿ ಮುಳುಗಿ ಹೋದವು. ಆದರೆ ಸರ್ಕಾರ ಯಾವ ಪರಿಹಾರವನ್ನು ನೀಡಿಲ್ಲ.

*ವಸತಿ ನಿರ್ಮಾಣ : ಇಲ್ಲಾ

*ಶೈಕ್ಷಣಕ ಪ್ರಗತಿಯ ಅಂಶಗಳು : ಶೈಕ್ಷಣಿಕ ಪ್ರಗತಿಯ ಅಂಶಗಳು ನಮ್ಮೂರಿನಲ್ಲಿ ಕಂಡುಬರುವುದಿಲ್ಲ.

*ಸರ್ಕಾರೇತರ ಸಂಸ್ಥೆಗಳ ಪಾತ್ರ : ಸಂಘ ಸಂಸ್ಥೆಗಳ ಪಾತ್ರ ಇಲ್ಲಿ ಕಂಡು ಬಂದಿಲ್ಲ

*ಎನ್.ಜಿ.ಓ.ಗಳ ಪಾತ್ರ (ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ) : ಇಲ್ಲಾ

೧೦. ಪ್ರಸ್ತುತ ಇಂದಿನ ಸ್ಥಿತಿ ಗತಿ : ಊರಿನಲ್ಲಿ ಶೇ.೪೦ ಜನರು ಬೇರೆ ಪ್ರದೇಶಗಳಿಗೆ ವಲಸೆ ಹೋಗಿದ್ದಾರೆ. ಪ್ರವಾಹದಿಂದ ಇಲ್ಲಿ ಯಾವ ಕೆಲಸ ಕಾರ್ಯಗಳು ಇರುವುದಿಲ್ಲ. ಅದಕ್ಕಾಗಿ ವಲಸೆ ಹೋಗಿ ಯಾವುದಾದರೂ ಕೆಲಸದಲ್ಲಿ ತೊಡಗಿ, ಜೀವನ ಸಾಗಿಸುತ್ತಾರೆ.

*ಹಣ ದೊರಕಿದೆಯೇ : ದೊರಕಿದೆ.

*ಯಾವ ಪ್ರಮಾಣದಲ್ಲಿ ದೊರಕಿದೆ : ಅಲ್ಪ ಪ್ರಮಾಣದಲ್ಲಿ ದೊರಕಿದೆಯೇ.

೧೧. ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಜಾತಿವಾರು ತಾರತಮ್ಯ ನಡೆದಿರುವುದೇ? : ಇಲ್ಲಾ

೧೨. ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಸಂಘ ಸಂಸ್ಥೆಗಳ ಪಾತ್ರ : ಯಾವ ಸಂಘ ಸಂಸ್ಥೆಗಳು ನೆರವಿಗೆ ಬಂದಿಲ್ಲ.

ಸಂದರ್ಶನದ ದಿನಾಂಕ ೨೫.೨.೦೭

ಜಿಲ್ಲೆ : ರಾಯಚೂರು

ತಾಲ್ಲೂಕು : ದೇವದುರ್ಗ

ಹೋಬಳಿ : ದೇವದುರ್ಗ

ಊರು : ಅಂಜಳ

೧. ಹೆಸರು : ಮಾನಶಯ್ಯ

೨. ವಯಸ್ಸು : ೪೫

೩. ಸಾಂಸಾರಿಕ ಜೀವನ>ಕುಟುಂಬ ವ್ಯವಸ್ಥೆ (ಮಕ್ಕಳು ಇತ್ಯಾದಿ) : ೩ ಜನ ಸದಸ್ಯರು

೪. ಧರ್ಮ ಮತ್ತು ಜಾತಿ : ಪರಿಶಿಷ್ಟ ಪಂಗಡ (ನಾಯಕ)

೫. ಹಿಂದೆ ಪ್ರವಾಹವಾಗಿದ್ದಾಗ ವರ್ಷಗಳ ನೆನಪು : ಹಿಂದೆ ಪ್ರವಾಹವಾಗಿದ್ದಾಗ ಬಹಳ ತೊಂದರೆಗಳಾಗಿದ್ದವು. ಪ್ರವಾಹದಿಂದಾಗಿ ಊರಿನಲ್ಲಿರುವ ಗುಡಿಸಲು, ಮನೆಗಳಿಗೆ ನೀರು ನುಗ್ಗಿ ಬಂದು, ನೀರಿನಲ್ಲಿಯೇ ಜೀವನ ಸಾಗಿಸುವ ಚಿಂತಾಜನಕ ಸ್ಥಿತಿಯಾಗಿತ್ತು.

೬. ೨೦೦೫-೦೬ರ ಪ್ರವಾಹ ದಿನಗಳ ಅನುಭವ : ಈ ಪ್ರವಾಹದಿಂದ ನಮ್ಮ ಊರಿನಲ್ಲಿಜನರು ತುಂಬಾ ಕಷ್ಟ ಅನುಭವಿಸಿದರಲ್ಲದೇ ಅನೇಕ ಕಾಯಿಲೆಗಳಿಗೆ ತುತ್ತಾದರು. ಆಹಾರ, ವಸತಿ, ಕುಡಿಯುವ ನೀರಿಗೆ ತುಂಬಾ ಸಮಸ್ಯೆ ಎದುರಿಸಬೇಕಾಯಿತು.

೭. ಜಿಲ್ಲಾಡಳಿತ ವಹಿಸಿದ ಕ್ರಮಗಳು : ಯಾವ ಪರಿಹಾರ ಕ್ರಮಗಳನ್ನು ಕೈಗೊಂಡಿಲ್ಲ.

*ಆಹಾರ ಮತ್ತು ಕುಡಿಯುವ ನೀರಿನ ವ್ಯವಸ್ಥೆ: ತುಂಬಾ ತೊಂದರೆಯಾಗಿತ್ತು. ಪ್ರವಾಹದಿಂದಾಗಿ ಕೊಳಕು ನೀರು

| | | |
|---|---|---|
| | | ಎಲ್ಲೆಡೆ ನಿಂತು, ಜನರಿಗೆ ನೀರಿನ ಸಮಸ್ಯೆಯಾಗಿತ್ತು. ಕುಡಿಯಲು ಸ್ವಚ್ಛವಾದ ನೀರು ಇರಲಿಲ್ಲ. |
| *ವದ್ದಿಕೆ | : | ಸಮಸ್ಯೆ ಕಂಡುಬಂದಿಲ್ಲ |
| *ತಾತ್ಕಾಲಿಕ ವಸತಿ | : | ಸಮಸ್ಯೆ ಕಂಡುಬಂದಿಲ್ಲ |
| *ಬಟ್ಟೆ | : | ಸಮಸ್ಯೆ ಕಂಡುಬಂದಿಲ್ಲ |
| *ಜಾನವಾರುಗಳಿಗೆ ಮೇವು | : | ಮೇವಿನ ತೊಂದರೆಯಾಗಿತ್ತು. |
| *ಆರೋಗ್ಯ ತಪಾಸಣೆ | : | ಇಲ್ಲ. ನಮ್ಮ ಈ ಊರಿನಲ್ಲಿ ಜನರಿಗೆ ಕಾಯಿಲೆ ಬಂದರೆ, ತುಂಬಾ ಸಮಸ್ಯೆಯಾಗುತ್ತದೆ. ಇಲ್ಲಿ ಆರೋಗ್ಯ ತಪಾಸಣಾ ಕೇಂದ್ರಗಳು ಇಲ್ಲ. |
| ೮. ಪ್ರವಾಹದಿಂದ ಉಂಟಾದ | : | ಪ್ರವಾಹದಿಂದ ಜನರು ಅನೇಕ ಕಷ್ಟ ತೊಂದರೆಗಳ ಬಗ್ಗೆ ಅನುಭವಿಸಿದರು. ಜ್ವರದಿಂದ ಮತ್ತು ಅನೇಕ ಕಾಯಿಲೆಗಳು ಸಂಭವಿಸಿದವಲ್ಲದೇ ಇದರ ಭೀತಿಯಿಂದ ಜನರು ಬೇರೆ ಪ್ರದೇಶಗಳಿಗೆ ವಲಸೆ ಹೋದರು. |
| *ಅರ್ಥಿಕ ದುಃಸ್ಥಿತಿ | : | ಪ್ರವಾಹದಿಂದಾಗಿ, ಹೊಲದಲ್ಲಿ ಬೆಳೆದ ಎಲ್ಲಾ ಬೆಳೆಯೂ ನೀರು ಪಾಲಾಗಿ ಬೆಳೆಯನ್ನೇ ನಂಬಿ ಅದರ ಲಾಭದಲ್ಲಿ ಜೀವನ ಸಾಗಿಸುವ ನಾವು ಇಂತಹ ಪ್ರವಾಹದಿಂದ ಅರ್ಥಿಕವಾಗಿ ತುಂಬಾ ಸಮಸ್ಯೆ ಎದುರಿಸಬೇಕಾಯಿತು. ಮತ್ತು ಆರ್ಥಿಕ ದುಸ್ಥಿತಿ ನಮ್ಮ ಊರಿನಲ್ಲಿ ಸಂಭವಿಸಿತ್ತು. |

| | | |
|---|---|---|
| | *ಶೈಕ್ಷಣಿಕ ಸಮಸ್ಯೆ | : ಶೈಕ್ಷಣಿಕ ಸಮಸ್ಯೆ ಇತ್ತು. |
| | *ಮನೆ ಮತ್ತು ಜಾನುವಾರುಗಳ ದುಸ್ಥಿತಿ | : ಮನೆಗಳು ಪ್ರವಾಹದಿಂದ ನೀರಿನಲ್ಲಿ ಅರ್ಧದವರೆಗೂ ಮುಳುಗಿದ್ದವು. ಈ ಕಾರಣದಿಂದ ಹೆಚ್ಚು ಬೇರೆ ಪ್ರದೇಶಗಳ ಕಡೆ ವಲಸೆ ಹೋದರು. ಜಾನುವಾರುಗಳಿಗೆ ಮೇವು ಇಲ್ಲದೇ ತುಂಬಾ ದುಸ್ಥಿತಿ ಉಂಟಾಗಿತ್ತು. |
| ೯. | ಸರ್ಕಾರ ಮತ್ತು ಪ್ರವಾಹದ ಪರಿಹಾರಗಳು | : ಪ್ರವಾಹ ಬಂದಾಗ ಸರ್ಕಾರ ಅಷ್ಟೇನು ಸಹಾಯ ಮಾಡಿಲ್ಲ. ಅವರು ಕೊಟ್ಟಿರುವ ಪರಿಹಾರ ಧನ ಗೊಬ್ಬರ ಮತ್ತು ಬೀಜದ ಹಣಕ್ಕೆ ಸರಿ ಹೋಗೋದಿಲ್ಲ. ನಾವು ಖರ್ಚು ಮಾಡಿದ ಹಣದಷ್ಟು ಸಹ ಪರಿಹಾರ ಸಿಕ್ಕಿಲ್ಲ. |
| | *ಬೆಳೆನಷ್ಟ ಹಾಗೂ ಪರಿಹಾರ | : ನಮ್ಮ ೪ ಎಕರೆ ಹೊಲದಲ್ಲಿ ಬೆಳೆದ ಎಲ್ಲಾ ಬೆಳೆಯು ಪ್ರವಾಹದಿಂದ ನೀರಿನಲ್ಲಿ ಮುಳುಗಿ ಹೋಗಿತ್ತು. ೧ ಎಕರೆಗೆ ೮೦೦ ರೂಪಾಯಿಯಂತೆ ಪರಿಹಾರ ಕೊಟ್ಟಿದ್ದಾರೆ. ನಾವು ಬೆಳೆ ಚೆನ್ನಾಗಿ ಬೆಳೆದಿದ್ದರೆ, ೨೦ ರಿಂದ ೨೫ ಸಾವಿರ ಲಾಭ ಆಗುತ್ತಿತ್ತು. ಇವರು ಕೊಟ್ಟಿರುವ ಪರಿಹಾರ ನಮಗೆ ಹೇಗೆ ಸಾಕಾಗುತ್ತೆ. |
| | *ವಸತಿ ನಿರ್ಮಾಣ | : ಸಮಸ್ಯೆ ಕಂಡುಬಂದಿಲ್ಲ. |
| | *ಶೈಕ್ಷಣಕ ಪ್ರಗತಿಯ ಅಂಶಗಳು | : ಸಮಸ್ಯೆ ಕಂಡುಬಂದಿಲ್ಲ. |
| | *ಸರ್ಕಾರೇತರ ಸಂಸ್ಥೆಗಳ ಪಾತ್ರ | : ಇಲ್ಲಾ |
| | *ಎನ್.ಜಿ.ಓ.ಗಳ ಪಾತ್ರ (ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ) | : ಇಲ್ಲಾ |

| | | |
|---|---|---|
| ೧೦. ಪ್ರಸ್ತುತ ಇಂದಿನ ಸ್ಥಿತಿ ಗತಿ | : | ಈಗ ಸಾಧಾರಣ ಸ್ಥಿತಿ ಇದೆ. ಹೆಚ್ಚಿನ ಹೆಚ್ಚು ಜನರು ಹೆಚ್ಚು ಬದಕಲು ತಮ್ಮ ಜೀವನ ನಿರ್ವಹಣೆಗಾಗಿ ದುಡಿಯಲು. ಬೇರೆ ಪ್ರದೇಶಗಳಿಗೆ ವಲಸೆ ಹೋಗಿದ್ದಾರೆ. |
| *ಹಣ ದೊರಕಿದೆಯೇ | : | ಸ್ವಲ್ಪ ದೊರಕಿದೆ. |
| *ಯಾವ ಪ್ರಮಾಣದಲ್ಲಿ ದೊರಕಿದೆ | : | ೧ ಎಕರೆಗೆ ೮೦೦ ರೂಪಾಯಿಯಂತೆ ಪರಿಹಾರ ಕೊಟ್ಟಿದ್ದಾರೆ. |
| ೧೧. ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಜಾತಿವಾರು ತಾರತಮ್ಯ ನಡೆದಿರುವುದೇ? | : | ಸರಿಯಾಗಿ ಗೊತ್ತಿಲ್ಲ. |
| ೧೨. ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಸಂಘ ಸಂಸ್ಥೆಗಳ ಪಾತ್ರ | : | ಇಲ್ಲಾ |

ಸಂದರ್ಶನದ ದಿನಾಂಕ ೨೭.೨.೦೭

ಜಿಲ್ಲೆ : ರಾಯಚೂರು

ತಾಲ್ಲೂಕು : ದೇವದುರ್ಗ

ಹೋಬಳಿ : ದೇವದುರ್ಗ

ಊರು : ಮೆದುರುಗೋಳ

೧. ಹೆಸರು : ವಿಜಯಕುಮಾರ

೨. ವಯಸ್ಸು : ೩೧

೩. ಸಾಂಸಾರಿಕ ಜೀವನ>ಕುಟುಂಬ ವ್ಯವಸ್ಥೆ (ಮಕ್ಕಳು ಇತ್ಯಾದಿ) : ೫ ಜನ

೪. ಧರ್ಮ ಮತ್ತು ಜಾತಿ : ವೀರಶೈವ ಲಿಂಗಾಯತ

೫. ಹಿಂದೆ ಪ್ರವಾಹವಾಗಿದ್ದಾಗ : ೧೯೮೦ರಲ್ಲಿ ಪ್ರವಾಹವಾಗಿ, ಅನೇಕ ವರ್ಷಗಳ ನೆನಪು ಸಮಸ್ಯೆಗಳು ಉದ್ಭವಿಸಿದ್ದವು. ಆಗ ಮೆದುರುಗೋಳ ಗ್ರಾಮವನ್ನು ಸ್ಥಳಾಂತರಿಸಬೇಕು ಎಂದು ಊರಿನ ಜನರೆಲ್ಲರೂ ಒತ್ತಾಯಿಸಿದರು. ಯಾವುದೇ ಜಾಗ ಸಿಗದ ಕಾರಣ ಈ ವಿಷಯ ನೆನೆಗುದಿಗೆ ಬಿದ್ದಿತ್ತು.

೬. ೨೦೦೫-೦೬ರ ಪ್ರವಾಹ ದಿನಗಳ ಅನುಭವ : ಈ ಪ್ರವಾಹದಿಂದ ಸಹ ಜನರು ಅನೇಕ ತೊಂದರೆಗಳನ್ನು ಅನುಭವಿಸಿದರು. ಸರಕಾರ ಸ್ಥಳಾಂತರಿಸಬೇಕು ಎಂಬ ಆದೇಶ ಇನ್ನು ಕಾರ್ಯರೂಪಕ್ಕೆ ಬಂದಿಲ್ಲ. ಜನರು ತಮ್ಮ ಅಳಲನ್ನು ಈಗಲೂ ತೋಡಿಕೊಳ್ಳುತ್ತಿರುತ್ತಾರೆ. ಈ ಸಮಸ್ಯೆ ಬಗೆಹರಿದರೆ ಜನರಿಗೆ ಅನೇಕ ಅನುಕೂಲಗಳಾಗಬಹುದು.

| | | | |
|---|---|---|---|
| ೭. | ಜಿಲ್ಲಾಡಳಿತ ವಹಿಸಿದ ಕ್ರಮಗಳು | : | ಕೆಲವೊಂದು ಪರಿಹಾರ ಕ್ರಮಗಳನ್ನು ಕೈಗೊಂಡಿದ್ದರು. ಜನರಿಗೆ ಅಷ್ಟೇನು ಅನುಕೂಲಗಳಾಗಿಲ್ಲ. ಕೇಂದ್ರ ಅಧ್ಯಯನ ತಂಡ ಪ್ರವಾಹ ವೀಕ್ಷಣೆಗೆ ಬಂದು, ಅಹವಾಲನ್ನು ಆಲಿಸಿ ಈ ಊರಿನ ಸ್ಥಳಾಂತರವಾಗಬೇಕು ಎಂದು ಹೇಳಿ ಹೋದರು. ಆದರೆ ಸ್ಥಳಾಂತರನೂ ಆಗಿಲ್ಲ. ಪರಿಹಾರಗಳು ಸಿಕ್ಕಿಲ್ಲ. |
| | *ಆಹಾರ ಮತ್ತು ಕುಡಿಯುವ ನೀರಿನ ವ್ಯವಸ್ಥೆ | : | ಕುಡಿಯುವ ನೀರಿನ ವ್ಯವಸ್ಥೆ ಸಮರ್ಪಕವಾಗಿಲ್ಲ. ಪ್ರವಾಹ ಸಂದರ್ಭದಲ್ಲಿ ನೀರಿನ ಸಮಸ್ಯೆ ಇತ್ತು. ಈಗಲೂ ನೀರಿನ ಸಮಸ್ಯೆ ಇದೆ. |
| | *ವದ್ದಿಕೆ | : | ಸಮಸ್ಯೆ ಕಂಡುಬಂದಿಲ್ಲ. |
| | *ತಾತ್ಕಾಲಿಕ ವಸತಿ | : | ಕಲ್ಪಿಸಲಾಗಿತ್ತು. |
| | *ಬಟ್ಟೆ | : | ಸಮಸ್ಯೆ ಕಂಡುಬಂದಿಲ್ಲ |
| | *ಜಾನವಾರುಗಳಿಗೆ ಮೇವು | : | ಜಾನುವಾರುಗಳಿಗೆ ಮೇವಿನ ಸಮಸ್ಯೆಯಾಗಿತ್ತು. |
| | *ಆರೋಗ್ಯ ತಪಾಸಣೆ | : | ಆರೋಗ್ಯಾಧಿಕಾರಿಗಳು ಊರಿಗೆ ಭೇಟಿಕೊಟ್ಟು ಆರೋಗ್ಯ ತಪಾಸಣೆ ಮಾಡಿದರು. |
| ೮. | ಪ್ರವಾಹದಿಂದ ಉಂಟಾದ ತೊಂದರೆಗಳ ಬಗ್ಗೆ | : | ಪ್ರವಾಹದಿಂದ ಅನೇಕ ತೊಂದರೆಗಳು ಉದ್ಭವಿಸಿದವು. ಕುಡಿಯುವ ನೀರಿನ ಸಮಸ್ಯೆ, ಜಾನುವಾರುಗಳಿಗೆ ಮೇವಿನ ಸಮಸ್ಯೆ, ಜನರು ಅನೇಕ ಕಾಯಿಲೆಯಗಳಿಂದ, ಬಳಲುವ ಸಮಸ್ಯೆ ಹೀಗೆ ಅನೇಕ ತೊಂದರೆಗಳನ್ನು ಅನುಭವಿಸಿದ್ದಾರೆ. |

| | | |
|---|---|---|
| *ಅರ್ಥಿಕ ದುಃಸ್ಥಿತಿ | : | ಜಮೀನುಗಳಲ್ಲಿ ಬೆಳೆದ ಬೆಳೆ ಎಲ್ಲಾ ನಾಶವಾಗಿ ಜನರು ಆರ್ಥಿಕವಾಗಿ ತುಂಬಾ ತೊಂದರೆ ಅನುಭಪಿಸಿದರು. |
| *ಶೈಕ್ಷಣಿಕ ಸಮಸ್ಯೆ | : | ಪ್ರವಾಹದಿಂದ ಮಕ್ಕಳು ಶಾಲೆಗೆ ನೀರಿನಲ್ಲಿ ಹೋಗಲು. ಭಯಪಡುತ್ತಿದ್ದರು. |
| *ಮನೆ ಮತ್ತು ಜಾನುವಾರುಗಳ ದುಸ್ಥಿತಿ | : | ಜಾನುವಾರುಗಳಿಗೆ ಮೇವಿನ ಸಮಸ್ಯೆ ತುಂಬಾನೆ ಇತ್ತು. |
| ೯. ಸರ್ಕಾರ ಮತ್ತು ಪ್ರವಾಹದ ಪರಿಹಾರಗಳು | : | ಸರ್ಕಾರದಿಂದ ಕೆಲವೊಬ್ಬರಿಗೆ ಸ್ವಲ್ಪ ಪ್ರಮಾಣದಲ್ಲಿ ಪರಿಹಾರ ಧನ ಸಿಕ್ಕಿದೆ. |
| *ಬೆಳೆನಷ್ಟ ಹಾಗೂ ಪರಿಹಾರ | : | ಸರ್ಕಾರದಿಂದ ೧ ಎಕರೆಗೆ ೩೦೦ ರೂಪಾಯಿ ಅಥವಾ ೫೦೦ ರೂಪಾಯಿ ಪರಿಹಾರ ದೊರಕಿದೆ. |
| *ವಸತಿ ನಿರ್ಮಾಣ | : | ನಮ್ಮೂರನ್ನು ಸ್ಥಳಾಂತರಿಸುವ ವ್ಯವಸ್ಥೆ ಮಾಡಲಾಗಿದೆ. ಸರ್ಕಾರದ ಸ್ಥಳಾಂತರದ ಆದೇಶ ಕಾರ್ಯರೂಪಕ್ಕೆ ಬಂದರೆ. ಜನರು ಸಂತೋಷಪಡಬಹುದು. |
| *ಶೈಕ್ಷಣಕ ಪ್ರಗತಿಯ ಅಂಶಗಳು | : | ಇಲ್ಲಿ ಮಕ್ಕಳು ಸರಿಯಾಗಿ ಶಾಲೆಗೆ ಹೋಗೋದಿಲ್ಲ. ಶೈಕ್ಷಣಿಕವಾಗಿ ನಮ್ಮೂರು ತುಂಬಾ ಹಿಂದುಳಿದಿದೆ. |
| *ಸರ್ಕಾರೇತರ ಸಂಸ್ಥೆಗಳ ಪಾತ್ರ | : | ಯಾವ ಸಂಸ್ಥೆಗಳು ಸಹಾಯ ಮಾಡಿಲ್ಲ. |
| *ಎನ್.ಜಿ.ಓ.ಗಳ ಪಾತ್ರ (ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ) | : | ಇಲ್ಲಾ |
| ೧೦. ಪ್ರಸ್ತುತ ಇಂದಿನ ಸ್ಥಿತಿ ಗತಿ | : | ನಮ್ಮೂರಿನಲ್ಲಿ ವಲಸೆ ಹೋಗುತ್ತಾರೆ ಹೆಚ್ಚು ಇಂದಿನ ಸ್ಥಿತಿ ತೊಂದರೆಯಾಗಿತ್ತು. |
| *ಹಣ ದೊರಕಿದೆಯೇ | : | ಸ್ವಲ್ಪ ಹಣ ದೊರಕಿದೆ. |

*ಯಾವ ಪ್ರಮಾಣದಲ್ಲಿ ದೊರಕಿದೆ : ಒಣ ಬೇಸಾಯ ಮತ್ತು ಬೆಳೆ ಎಷ್ಟು ನಾಶವಾಗಿದೆ ಎಂಬುದನ್ನು ಲೆಕ್ಕಹಾಕಿ ಸ್ವಲ್ಪ ಹಣ ದೊರಕಿದೆ.

೧೧. ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಜಾತಿವಾರು ತಾರತಮ್ಯ ನಡೆದಿರುವುದೇ? : ಪ್ರಬಲವಿರುವವರು ಮತ್ತು ಬಹು ಸಂಖ್ಯಾತ ಜನರಿಗೆ ಅನುಕೂಲವಾಗಿದೆ.

೧೨. ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಸಂಘ ಸಂಸ್ಥೆಗಳ ಪಾತ್ರ : ಇಲ್ಲಾ

ಸಂದರ್ಶನದ ದಿನಾಂಕ.೦೨.೦೩.೦೭

೧೦

| | | |
|---|---|---|
| ಜಿಲ್ಲೆ | : | ರಾಯಚೂರು |
| ತಾಲ್ಲೂಕು | : | ದೇವದುರ್ಗ |
| ಹೋಬಳಿ | : | ದೇವದುರ್ಗ |
| ಊರು | : | ಅಂಜಳ |
| ೧. ಹೆಸರು | : | ಹನುಮಂತಿ |
| ೨. ವಯಸ್ಸು | : | ೪೫ |
| ೩. ಸಾಂಸಾರಿಕ ಜೀವನ>ಕುಟುಂಬ ವ್ಯವಸ್ಥೆ (ಮಕ್ಕಳು ಇತ್ಯಾದಿ) | : | ೧೫ ಜನ ಸದಸ್ಯರು ಅವಿಭಕ್ತ ಕುಟುಂಬ |
| ೪. ಧರ್ಮ ಮತ್ತು ಜಾತಿ | : | ಕುರುಬರು |
| ೫. ಹಿಂದೆ ಪ್ರವಾಹವಾಗಿದ್ದಾಗ ವರ್ಷಗಳ ನೆನಪು | : | ಬಹಳ ವರ್ಷಗಳ ಹಿಂದೆ ನದಿ ಪ್ರವಾಹದಿಂದ ನಮ್ಮೂರಿನ ಜನರಿಗೆ ತುಂಬಾ ತೊಂದರೆಗಳಾಗಿದ್ದವು. |
| ೬. ೨೦೦೫-೦೬ರ ಪ್ರವಾಹ ದಿನಗಳ ಅನುಭವ | : | ಹೋದ ವರ್ಷ ಪ್ರವಾಹ ಬಂದಾಗ ನಮ್ಮೂರಿನ ಜನ ಅನೇಕ ಕಷ್ಟ ಅನುಭವಿಸಿದರು, ನೀರು ಹೊಲಗಳಿಗೆ ನುಗ್ಗಿ, ನಾವು ಬೆಳೆದ ಬೆಳೆ ಎಲ್ಲಾ ಹಾಳಾಗಿ ಹೊಗಿತ್ತು. ಮನೆಗಳಿಗೆ ಸಹ ನೀರು ನುಗ್ಗಿ ಬಂದು, ನಮಗೆ ೧೦-೧೫ ದಿನಗಳವರೆಗೆ ಅಡುಗೆ ಮಾಡೋಕೆ ತುಂಬಾ ಕಷ್ಟಪಟ್ಟೀವಿ. |
| ೭. ಜಿಲ್ಲಾಡಳಿತ ವಹಿಸಿದ ಕ್ರಮಗಳು | : | ಯಾರು ಬಂದಿಲ್ಲ. ಸಹಾಯ ಮಾಡಿಲ್ಲ. |
| *ಆಹಾರ ಮತ್ತು ಕುಡಿಯುವ ನೀರಿನ ವ್ಯವಸ್ಥೆ | : | ಕುಡಿಯುವ ನೀರಿಗೆ ಬಹಳ ತ್ರಾಸ ಆಗಿತ್ತು. ಪ್ರವಾಹದಿಂದ ನೀರು ಬಹಳ ಗಲೀಜಾಗಿದ್ದುದರಿಂದ, ಚೋಲೋ ನೀರು ಕುಡಿಯೋಕೆ ಇರಲಿಲ್ಲ. |

| | | | |
|---|---|---|---|
| | *ವದ್ದಿಕೆ | : | ಸಮಸ್ಯೆ ಕಂಡುಬಂದಿಲ್ಲ |
| | *ತಾತ್ಕಾಲಿಕ ವಸತಿ | : | ಸಮಸ್ಯೆ ಕಂಡುಬಂದಿಲ್ಲ |
| | *ಬಟ್ಟೆ | : | ಯಾರು ಸಹಾಯ ಮಾಡೋಕೆ ಬಂದಿಲ್ಲ. |
| | *ಜಾನವಾರುಗಳಿಗೆ ಮೇವು | : | ದನಕರುಗಳಿಗೆ ಮೇವಿನ ತ್ರಾಸ ಬಹಳ ಇದೇ. |
| | *ಆರೋಗ್ಯ ತಪಾಸಣೆ | : | ನಮ್ಮೂರಿನಾಗೇ ದವಾಖಾನೆಗಳು ಇಲ್ಲ. ರೋಗ ರುಜಿನ ಬಂದರೆ, ಜನರು ಬಹಳ ತೊಂದರೆಪಡ್ತಾರೆ. |
| ೮. | ಪ್ರವಾಹದಿಂದ ಉಂಟಾದ ತೊಂದರೆಗಳ ಬಗ್ಗೆ | : | ನದಿ ನೀರು ಊರಿನೊಳಗೆ ನುಗ್ಗಿ ಬಂದಿದ್ದರಿಂದ ನಮ್ಮೂರಿನ ಜನರು ಅಂಜಿಕೊಂಡು, ಊರು ಬಿಟ್ಟು ಬೇರೆ ಪ್ರದೇಶಗಳಿಗೆ ಹೋದರು. |
| | *ಅರ್ಥಿಕ ದುಃಸ್ಥಿತಿ | : | ಹೊಲದಾಗ ಬೆಳೆದ ಎಲ್ಲಾ ಬೆಳೆ ನಾಶವಾಗಿ ಜನರ ಕೈಯಲ್ಲಿ ರೊಕ್ಕ ಇಲ್ಲವಾಗಿ, ಜೀವನ ಸಾಗಿಸಲು ಬಹಳ ಕಷ್ಟ ಪಟ್ಟರು. |
| | *ಶೈಕ್ಷಣಿಕ ಸಮಸ್ಯೆ | : | ರಸ್ತೆಯಲ್ಲಿ ನೀರು ನುಗ್ಗಿದ್ದರಿಂದ ಮಕ್ಕಳು ಶಾಲೆಗೆ ಹೋಗುತ್ತಿರಲಿಲ್ಲ. |
| | *ಮನೆ ಮತ್ತು ಜಾನುವಾರುಗಳ ದುಃಸ್ಥಿತಿ | : | ಮನೆಗಳು ಕುಸಿದು ಬೀಳುತ್ತಿದ್ದರಿಂದ, ಭಯ ಆಗಿತ್ತು. ದನ ಕರುಗಳಿಗೆ ಮೇವಿನ ತೊಂದರೆಯಾಗಿತ್ತು. |
| ೯. | ಸರ್ಕಾರ ಮತ್ತು ಪ್ರವಾಹದ ಪರಿಹಾರಗಳು | : | ಸರ್ಕಾರ ನಮಗ ಅಷ್ಟೇನು ಸಹಾಯ ಮಾಡಿಲ್ಲ. ಸ್ವಲ್ಪ ಸಹಾಯ ಮಾಡ್ಯಾದ ಅಂತ ಹೇಳಬಹುದು. |

*ಬೆಳೆನಷ್ಟ ಹಾಗೂ ಪರಿಹಾರ : ಬೆಳೆಯಲ್ಲಾ ಬಹಳ ಹಾಳಾಯಿತು. ಆದರೆ ಪರಿಹಾರ ಅಂತ ೧ ಎಕರೆಗೆ ೮೦೦ರೂಪಾಯಿ ಕೊಟ್ಯಾರ. ಇಷ್ಟು ಹಣ ನಮಗ ಹೇಗ ಆಗುತ್ತೇ, ನೀವೇ ಹೇಳಿ.

*ವಸತಿ ನಿರ್ಮಾಣ : ಸಮಸ್ಯೆ ಕಂಡುಬಂದಿಲ್ಲ

*ಶೈಕ್ಷಣಕ ಪ್ರಗತಿಯ ಅಂಶಗಳು : ಸಮಸ್ಯೆ ಕಂಡುಬಂದಿಲ್ಲ

*ಸರ್ಕಾರೇತರ ಸಂಸ್ಥೆಗಳ ಪಾತ್ರ : ಇಲ್ಲಾ

*ಎನ್.ಜಿ.ಓ.ಗಳ ಪಾತ್ರ : ಇಲ್ಲಾ

(ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ)

೧೦. ಪ್ರಸ್ತುತ ಇಂದಿನ ಸ್ಥಿತಿ ಗತಿ : ಊರಿನಲ್ಲಿ ಬಹಳ ಜನ ಇರಲ್ಲ. ದುಡಿಯಲು ಬೇರೆ ಕಡೆ ಹೋಗುತ್ತಿರುತ್ತಾರೆ.

*ಹಣ ದೊರಕಿದೆಯೇ : ಸ್ವಲ್ಪ ಹಣ ಕೊಟ್ಯಾರ.

*ಯಾವ ಪ್ರಮಾಣದಲ್ಲಿ ದೊರಕಿದೆ : ೧ ಎಕರೆಗೆ ೮೦೦ ರೂಪಾಯಿಯಂತೆ ಪರಿಹಾರ ಕೊಟ್ಟಿದ್ದಾರೆ.

೧೧. ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಜಾತಿವಾರು ತಾರತಮ್ಯ ನಡೆದಿರುವುದೇ? : ಇಲ್ಲಾ.

೧೨. ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಸಂಘ ಸಂಸ್ಥೆಗಳ ಪಾತ್ರ : ಇಲ್ಲಾ.

ಸಂದರ್ಶನದ ದಿನಾಂಕ ೫.೩.೦೭

೧೧

| | | |
|---|---|---|
| ಜಿಲ್ಲೆ | : | ರಾಯಚೂರು |
| ತಾಲ್ಲೂಕು | : | ದೇವದುರ್ಗ |
| ಹೋಬಳಿ | : | ಜಾಲಹಳ್ಳಿ |
| ಊರು | : | ಹೇರುಂಡಿ |
| ೧. ಹೆಸರು | : | ಮಾಣಕ್ಕಮ್ಮ |
| ೨. ವಯಸ್ಸು | : | ೪೫ |
| ೩. ಸಾಂಸಾರಿಕ ಜೀವನ>ಕುಟುಂಬ ವ್ಯವಸ್ಥೆ (ಮಕ್ಕಳು ಇತ್ಯಾದಿ) | : | ೩ ಜನ ಸದಸ್ಯರು. |
| ೪. ಧರ್ಮ ಮತ್ತು ಜಾತಿ | : | ಕಬ್ಬೇರ |
| ೫. ಹಿಂದೆ ಪ್ರವಾಹವಾಗಿದ್ದಾಗ ವರ್ಷಗಳ ನೆನಪು | : | ಹಿಂದೆ ಪ್ರವಾಹವಾಗಿದ್ದಾಗ ಜನರು ಬಹಳ ಕಷ್ಟ ನಷ್ಟ ಅನುಭವಿಸಿದ್ದಾರೆ. |
| ೬. ೨೦೦೫-೦೬ರ ಪ್ರವಾಹ ದಿನಗಳ ಅನುಭವ | : | ಹಿಂದಿನಂತೆ ಈ ಪ್ರವಾಹವು ಅನೇಕ ತೊಂದರೆಗಳನ್ನು ನಮ್ಮೂರಿನ ಜನರಿಗೆ ತಂದಿತ್ತು. ಈ ಪ್ರವಾಹದ ಭೀಕರತೆ ಕಂಡು ಜನರು ತಮ್ಮ ಜೀವನ ಸಾಗಿಸೋದು ಹೇಗೆ ಎಂದು ಚಿಂತಾಕ್ರಾಂತರಾಗಿದ್ದರು. |
| ೭. ಜಿಲ್ಲಾಡಳಿತ ವಹಿಸಿದ ಕ್ರಮಗಳು | : | ಯಾರು ಯಾವ ಪರಿಹಾರ ಕ್ರಮಗಳನ್ನು ಕೈಗೊಂಡಿಲ್ಲ. |
| *ಆಹಾರ ಮತ್ತು ಕುಡಿಯುವ ನೀರಿನ ವ್ಯವಸ್ಥೆ | : | ಆಹಾರ ಮತ್ತು ಕುಡಿಯೋ ನೀರಿಗೆ ತುಂಬಾ ತ್ರಾಸ ಆಗಿತ್ತು. |
| *ವದ್ದಿಕೆ | : | ಸಮಸ್ಯೆ ಕಂಡುಬಂದಿಲ್ಲ |
| *ತಾತ್ಕಾಲಿಕ ವಸತಿ | : | ಸಮಸ್ಯೆ ಕಂಡುಬಂದಿಲ್ಲ |
| *ಬಟ್ಟೆ | : | ಸಮಸ್ಯೆ ಕಂಡುಬಂದಿಲ್ಲ |
| *ಜಾನವಾರುಗಳಿಗೆ ಮೇವು | : | ಮೇವಿನ ತೊಂದರೆ ಬಹಳ ಇತ್ತು. |

| | | |
|---|---|---|
| | *ಆರೋಗ್ಯ ತಪಾಸಣೆ | : ನಮ್ಮೂರಿನ ಜನರಿಗೆ ರೋಗ ರುಜಿನ ಬಂದರೆ ಊರಿನಲ್ಲಿ ದವಾಖಾನೆಗಳು ಇಲ್ಲ. ದೇವದುರ್ಗಕ್ಕೆ ಬಂದು ತೋರಿಸಿಕೊಂಡು ಹೋಗುತ್ತೇವೆ. |
| ೮. | ಪ್ರವಾಹದಿಂದ ಉಂಟಾದ ತೊಂದರೆಗಳ ಬಗ್ಗೆ | : ಪ್ರವಾಹದಿಂದ, ಕುಡಿಯುವ ನೀರಿಗೆ, ದನಕರುಗಳಿಗೆ ಮೇವು, ಜನರು ಕೂಲಿ ಕೆಲಸ ಮಾಡಿ ಬದುಕುವವರು ಈ ಪ್ರವಾಹದಿಂದ ಅವರು ಕೆಲಸವಿಲ್ಲದೇ, ಹತಾಶರಾಗಿ ಕುಳಿತ್ತಿದ್ದರು. |
| | *ಅರ್ಥಿಕ ದುಃಸ್ಥಿತಿ | : ಜನರು ಕೂಲಿ ಕೆಲಸ ಮಾಡಿ ತಮ್ಮ ಜೀವನ ಸಾಗಿಸೋರು. ಇಂತಹ ಪ್ರವಾಹದಿಂದ ಅವರು ಆರ್ಥಿಕವಾಗಿ ತುಂಬಾ ತೊಂದರೆ ಅನುಭವಿಸಿದರು. |
| | *ಶೈಕ್ಷಣಿಕ ಸಮಸ್ಯೆ | : ಇದೆ |
| | *ಮನೆ ಮತ್ತು ಜಾನುವಾರುಗಳ ದುಸ್ಥಿತಿ | : ಮನೆಗಳು ಕುಸಿಯುವ ಅಂಜಿಕೆ ನಮಗೆ ಇತ್ತು. ದನಕರುಗಳಿಗೆ ಮೇವಿನ ಬರವಿತ್ತು. |
| ೯. | ಸರ್ಕಾರ ಮತ್ತು ಪ್ರವಾಹದ ಪರಿಹಾರಗಳು | : ಅಲ್ಪ ಪ್ರಮಾಣದಲ್ಲಿ ಪರಿಹಾರ ದೊರಕಿದೆ. |
| | *ಬೆಳೆ ನಷ್ಟ ಹಾಗೂ ಪರಿಹಾರ | : ಬಹಳಷ್ಟು ಮಂದಿಗೆ ಬೆಳೆ ನಷ್ಟವಾಗಿದೆ. ಆದರೆ ಪರಿಹಾರ ಕೊಟ್ಟಿದ್ದು, ೧ ಎಕರೆಗೆ ೮೦೦ ರೂಪಾಯಿತಂತೆ ಕೊಟ್ಟಿದ್ದಾರೆ. |
| | *ವಸತಿ ನಿರ್ಮಾಣ | : ಸಮಸ್ಯೆ ಕಂಡುಬಂದಿಲ್ಲ. |
| | *ಶೈಕ್ಷಣಕ ಪ್ರಗತಿಯ ಅಂಶಗಳು | : ನಮ್ಮೂರಿನಾಗೇ ಬಹಳ ಜನ ಓದಿಲ್ಲ. ಮಕ್ಕಳು ಶಾಲೆಗೆ ಸರಿಯಾಗಿ ಹೋಗೊಲ್ಲ. ಆದರೂ ಈ ಕಡೆ ಯಾರು ಕಾಳಜಿ ವಹಿಸಿಲ್ಲ. |

| | | | |
|---|---|---|---|
| | *ಸರ್ಕಾರೇತರ ಸಂಸ್ಥೆಗಳ ಪಾತ್ರ | : | ಇಲ್ಲಾ |
| | *ಎನ್.ಜಿ.ಓ.ಗಳ ಪಾತ್ರ | : | ಇಲ್ಲಾ. |
| | (ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ) | | |
| ೧೦. | ಪ್ರಸ್ತುತ ಇಂದಿನ ಸ್ಥಿತಿ ಗತಿ | : | ಈಗಿನ ಪರಿಸ್ಥಿತಿ ಅಷ್ಟಕಷ್ಟೆ ಇದೆ. |
| | *ಹಣ ದೊರಕಿದೆಯೇ | : | ಸ್ವಲ್ಪ ಹಣ ದೊರಕಿದೆ. |
| | *ಯಾವ ಪ್ರಮಾಣದಲ್ಲಿ ದೊರಕಿದೆ | : | ಅಲ್ಪ ಪ್ರಮಾಣದಲ್ಲಿ . ೧ ಎಕರೆಗೆ ೮೦೦ ರೂಪಾಯಿ ಪರಿಹಾರ ಧನ ಕೊಟ್ಟಿದ್ದಾರೆ. |
| ೧೧. | ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಜಾತಿವಾರು ತಾರತಮ್ಯ ನಡೆದಿರುವುದೇ? | : | ಗೊತ್ತಿಲ್ಲ. |
| ೧೨. | ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಸಂಘ ಸಂಸ್ಥೆಗಳ ಪಾತ್ರ | : | ಇಲ್ಲಾ. |

ಸಂದರ್ಶನದ ದಿನಾಂಕ ೭.೩.೦೭

ಜಿಲ್ಲೆ : ರಾಯಚೂರು

ತಾಲ್ಲೂಕು : ದೇವದುರ್ಗ

ಹೋಬಳಿ : ಜಾಲಹಳ್ಳಿ

ಊರು : ಜಾಲಹಳ್ಳಿ

೧. ಹೆಸರು : ಬಸವರಾಜಪ್ಪ.

೨. ವಯಸ್ಸು : ೪೫

೩. ಸಾಂಸಾರಿಕ ಜೀವನ>ಕುಟುಂಬ ವ್ಯವಸ್ಥೆ (ಮಕ್ಕಳು ಇತ್ಯಾದಿ) : ಅವಿಭಕ್ತ ಕುಟುಂಬ. ೬ ಜನ ಸದಸ್ಯರು.

೪. ಧರ್ಮ ಮತ್ತು ಜಾತಿ : ವೀರಶೈವ ಲಿಂಗಾಯತ

೫. ಹಿಂದೆ ಪ್ರವಾಹವಾಗಿದ್ದಾಗ : ಹಿಂದೆ ಪ್ರವಾಹವಾಗಿದ್ದಾಗ ೨೫ ವರ್ಷಗಳ ನೆನಪು

ವರ್ಷಗಳ ಹಿಂದೆ, ನಾವು ಬುದ್ದಿನ್ನಿ ಗ್ರಾಮದಲ್ಲಿ ವಾಸವಾಗಿದ್ದೇವು. ಆಗ ಭೀಕರ ಪ್ರವಾಹದಿಂದ ಅನೇಕ ಕಾಯಿಲೆಗಳಾದ ಕಾಲರಾ, ಮಲೇರಿಯಾ ರೋಗಗಳಿಗೆ ತುತ್ತಾಗಿ, ಗ್ರಾಮದ ಎಲ್ಲಾ ಜನರು ಬುದ್ಧಿನ್ನಿ ಗ್ರಾಮವನ್ನು ಬಿಟ್ಟು ಬೇರೆ ಬೇರೆ ಗ್ರಾಮಗಳಲ್ಲಿ ವಸತಿ ಕಲ್ಪಿಸಿಕೊಂಡರು. ನಾನು ಮತ್ತು ನನ್ನ ಕುಟುಂಬದವರು, ಜಾಲಹಳ್ಳಿಯಲ್ಲ ವಾಸಿಸುತ್ತಿದ್ದೇವೆ. ಹೀಗೆ

ಈ ರೀತಿಯ ಅನೇಕ ಮಾಹಿತಿಗಳನ್ನು ನಮ್ಮ ಹಿರಿಯರು ಹೇಳುತ್ತಿರುತ್ತಾರೆ. ೨೦೦೧ರ ಜನಗಣತಿ ಪ್ರಕಾರ ಬುದ್ದಿನ್ನಿ ಗ್ರಾಮದಲ್ಲಿ ಈಗ ಜನರು ವಾಸಿಸುತ್ತಿಲ್ಲ.

ಈ ಮಾಹಿತಿಯನ್ನು ಮೊದಲು ಬುದ್ದಿನ್ನಿ ಗ್ರಾಮದ ನಿವಾಸಿಯಾಗಿದ್ದ, ಈಗ ಜಾಲಹಳ್ಳಿಯ ನಿವಾಸಿಯಾಗಿರುವ ಇವರು, ನಾನು ಕ್ಷೇತ್ರಕಾರ್ಯ ಮಾಡುವ ಸಂದರ್ಭದಲ್ಲಿ ಈ ಮಾಹಿತಿಯನ್ನು ಹೇಳಿದರು.

ಸಂದರ್ಶನದ ದಿನಾಂಕ ೧೦.೩.೦೭

೧೩

| | | |
|---|---|---|
| ಜಿಲ್ಲೆ | : | ರಾಯಚೂರು |
| ತಾಲ್ಲೂಕು | : | ದೇವದುರ್ಗ |
| ಹೋಬಳಿ | : | ದೇವದುರ್ಗ |
| ಊರು | : | ನಿಲವಂಜಿ |
| ೧. ಹೆಸರು | : | ಮಾಳಪ್ಪ ತಂದೆ ನಿಂಗಪ್ಪ |
| ೨. ವಯಸ್ಸು | : | ೬ನೇ ತರಗತಿ |
| ೩. ಶಾಲೆ ಹೆಸರು | : | ಹೇರುಂಡಿ ಪ್ರಾಥಮಿಕ ಶಾಲೆ |
| ೪ ಶೈಕ್ಷಣಿಕ ಸಮಸ್ಯೆ | : | ನಾವು ೮ ರಿಂದ ೧೦ ಜನ ಗೆಳೆಯರೆಲ್ಲರೂ ಸೇರಿ ಶಾಲೆಗೆ ಹೋಗುತ್ತೇವೆ. ಪ್ರವಾಹ ಬಂದಾಗ, ನಾವು ಮುಂಜಾನೆ ೭ ಗಂಟೆಗೆ ಹೊರಟರೆ, ಮತ್ತೆ ಶಾಲೆ ಮುಗಿಸಿಕೊಂಡು ರಾತ್ರಿ ೭ ಗಂಟೆಗೆ ವಾಪಸ್ಸಾಗ್ತಾ ಇದ್ದೀವಿ. ಬಸ್ಸುಗಳು ಇಲ್ಲದೇ ಇರೋದರಿಂದ, ಸುತ್ತುವರೆದೆ, ಹೋಗೋಕೆ ೧೦ ಕಿ.ಮೀ. ಆಗುತ್ತಿದ್ದು, ಇದಕ್ಕಾಗಿ ತುಂಬಾ ತೊಂದರೆಯಾಗುತ್ತಿತ್ತು. |

ಸಂದರ್ಶನದ ದಿನಾಂಕ ೧೨.೩.೦೭

| | | |
|---|---|---|
| ಜಿಲ್ಲೆ | : | ರಾಯಚೂರು |
| ತಾಲ್ಲೂಕು | : | ದೇವದುರ್ಗ |
| ಹೋಬಳಿ | : | ದೇವದುರ್ಗ |
| ಊರು | : | ನಿಲವಂಜಿ |
| ೧. ಹೆಸರು | : | ಮಾರ್ಕಂಡೇಯ ತಂದೆ ಮಲ್ಲಿಕಾರ್ಜುನ |
| ೨. ತರಗತಿ | : | ೭ನೇ ತರಗತಿ |
| ೩. ಶಾಲೆಯ ಹೆಸರು | : | ಹೇರುಂಡಿ ಪ್ರಾಥಮಿಕ ಶಾಲೆ. |
| ೪ ಶೈಕ್ಷಣಿಕ ಸಮಸ್ಯೆ | : | ಪ್ರವಾಹ ಬಂದಾಗ ನಮಗೆ ತುಂಬಾ ತೊಂದರೆಯಾಗಿದ್ದು, ಹೊಳೆ ಬಂದಾಗ ಶಾಲೆಗೆ ಹೋಗಬೇಕಾದರೆ. ನಾವು ಅಡ್ಡದಾರಿಯಿಂದ ಶಾಲೆಗೆ ಹೋಗುತ್ತಿದ್ದೇವು. ಆಗ ೨ ಕಿ.ಮಿ. ಆಗುತ್ತಿತ್ತು. ಪ್ರವಾಹ ಬಂದಾಗ ಸುತ್ತುವರಿದುಕೊಂಡು ಹೋಗಲು ೧೦ ಕಿ.ಮೀ. ಆಗುತ್ತಿತ್ತು. ನಮ್ಮೂರಿಗೆ ಬಸ್ಸಿನ ವ್ಯವಸ್ಥೆನೂ ಇಲ್ಲ. ಅದಕ್ಕಾಗಿ ನಂಗೆ ಬಹಳ ತೊಂದರೆಯಾಗಿತ್ತು. |

ಸಂದರ್ಶನದ ದಿನಾಂಕ ೧೩.೩.೦೭

ಜಿಲ್ಲೆ : ರಾಯಚೂರು

ತಾಲ್ಲೂಕು : ದೇವದುರ್ಗ

ಹೋಬಳಿ : ದೇವದುರ್ಗ

ಊರು : ಮೇದರಗೋಳ

೧. ಹೆಸರು : ಸುಭಾಸಚಂದ್ರ ಪಾಟೀಲ

೨. ವಯಸ್ಸು : ೩೧

೩. ಸಾಂಸಾರಿಕ ಜೀವನ>ಕುಟುಂಬ ವ್ಯವಸ್ಥೆ (ಮಕ್ಕಳು ಇತ್ಯಾದಿ) : ಅವಿಭಕ್ತ ಕುಟುಂಬ

೪. ದರ್ಮ ಮತ್ತು ಜಾತಿ : ವೀರಶೈವ ಲಿಂಗಾಯತ

೫. ಹಿಂದೆ ಪ್ರವಾಹವಾಗಿದ್ದಾಗ : ೧೯೬೦ ಹಿರಿಯರ ಅಭಿಪ್ರಾಯದ ಪ್ರಕಾರ ವರ್ಷಗಳ ನೆನಪುಸುಮಾರು ೩೦ ವರ್ಷಗಳ ಹಿಂದೆ ಪ್ರವಾಹ ಬಂದಿತ್ತಂತೆ.

೬. ೨೦೦೫-೦೬ರ ಪ್ರವಾಹ ದಿನಗಳ ಅನುಭವ : ತುಂಬಾ ಭಯದ ವಾತಾವರಣ. ಮನೆಯವರೆನ್ನೆಲ್ಲಾ ಸ್ಥಳಾಂತರಿಸುವ ವಿಚಾರವಿತ್ತು.

೭. ಜಿಲ್ಲಾಡಳಿತ ವಹಿಸಿದ ಕ್ರಮಗಳು : ಸ್ವಲ್ಪ ಕಾಳಜಿ ವಹಿಸಿತ್ತು

*ಆಹಾರ ಮತ್ತು ಕುಡಿಯುವ : ಸ್ವಲ್ಪ ಅಕ್ಕಿ ಮತ್ತು ನೀರಿನ ವ್ಯವಸ್ಥೆ ನೀರಿನ ವ್ಯವಸ್ಥೆ ಮಾಡಲಾಗಿತ್ತು.

*ವದ್ದಿಕೆ : ಸಮಸ್ಯೆ ಕಂಡುಬಂದಿಲ್ಲ

*ತಾತ್ಕಾಲಿಕ ವಸತಿ : ಕಲ್ಪಿಸಲಾಗಿತ್ತು.

*ಬಟ್ಟೆ : ಸಮಸ್ಯೆ ಕಂಡುಬಂದಿಲ್ಲ

*ಜಾನವಾರುಗಳಿಗೆ ಮೇವು : ಸಮಸ್ಯೆ ಕಂಡುಬಂದಿಲ್ಲ

*ಆರೋಗ್ಯ ತಪಾಸಣೆ : ಅರೋಗ್ಯಾಧಿಕಾರಿಗಳು ಆಗಮಿಸಿದ್ದರು.

೮. ಪ್ರವಾಹದಿಂದ ಉಂಟಾದ ತೊಂದರೆಗಳ ಬಗ್ಗೆ : ಹೆಚ್ಚು ತೊಂದರೆಯಾಗಿತ್ತು.

| | | |
|---|---|---|
| *ಅರ್ಥಿಕ ದುಸ್ಥಿತಿ | : | ಬೆಳೆನಾಶ ಉಂಟಾಯಿತು. |
| *ಶೈಕ್ಷಣಿಕ ಸಮಸ್ಯೆ | : | ಶಿಕ್ಷಕರ ಕೊರತೆ, ಮಕ್ಕಳಿಗೆ ಆ ಸಮಯದಲ್ಲಿ ಭಯದ ವಾತಾವರಣವಿತ್ತು. |
| *ಮನೆ ಮತ್ತು ಜಾನುವಾರುಗಳ ದುಸ್ಥಿತಿ | : | ಮನೆಗಳು ನೀರಿನಿಂದ ನೆನೆದು ಕುಸಿಯುತ್ತಿದ್ದವು. ಜಾನುವಾರುಗಳಿಗೆ ಮೇವಿನ ಸಮಸ್ಯೆ ಉಂಟಾಗುತ್ತಿತ್ತು. |
| ೯. ಸರ್ಕಾರ ಮತ್ತು ಪ್ರವಾಹದ ಪರಿಹಾರಗಳು | : | ಸ್ವಲ್ಪ ಕಾಳಜಿವಹಿಸಿತ್ತು. |
| *ಬೆಳೆನಷ್ಟ ಹಾಗೂ ಪರಿಹಾರ | : | ಬೆಳೆನಷ್ಟಕ್ಕೆ ಸರ್ಕಾರದಿಂದ ಪ್ರತಿ ಎಕರೆಗೆ ೩೦೦ ರಿಂದ ೫೦೦ ರೂಪಾಯಿಯಂತೆ ಕೊಡಲಾಯಿತು. |
| *ವಸತಿ ನಿರ್ಮಾಣ | : | ನಮ್ಮೂರನ್ನು ಸ್ಥಳಾಂತರಿಸುವ ವ್ಯವಸ್ಥೆ ಮಾಡಲಾಗಿದೆ. |
| *ಶೈಕ್ಷಣಿಕ ಪ್ರಗತಿಯ ಅಂಶಗಳು | : | ಶೈಕ್ಷಣಿಕ ಪ್ರಗತಿ ತುಂಬಾ ಕುಂಠಿತ. ಶೇ.೦೫ರಷ್ಟು ಇಲ್ಲ. |
| *ಸರ್ಕಾರೇತರ ಸಂಸ್ಥೆಗಳ ಪಾತ್ರ | : | ಇಲ್ಲಾ |
| *ಎನ್.ಜಿ.ಓ.ಗಳ ಪಾತ್ರ (ಸರ್ಕಾರೇತರ ಸಂಘ ಸಂಸ್ಥೆಗಳ ಪಾತ್ರ) | : | ಸಮೂಹ ಸಂಸ್ಥೆಯಿಂದ ಪ್ರಯುತ್ನ ಸ್ವಲ್ಪ ದಿನದವರೆಗೆ ಮಾತ್ರ ಇತ್ತು. |
| ೧೦. ಪ್ರಸ್ತುತ ಇಂದಿನ ಸ್ಥಿತಿ ಗತಿ | : | ನಮ್ಮೂರಿನ ಜನ ಹೆಚ್ಚು ವಲಸೆ ಪ್ರಮಾಣ ಕಂಡುಬರುತ್ತದೆ. |
| *ಹಣ ದೊರಕಿದೆಯೇ | : | ಸ್ವಲ್ಪ ದೊರತಿದೆ. |
| *ಯಾವ ಪ್ರಮಾಣದಲ್ಲಿ ದೊರಕಿದೆ | : | ಒಣ ಬೇಸಾಯ ಮತ್ತು ನೀರಾವರಿ ಆಧಾರದ ಮೇಲೆ ಬೆಳೆಗಳ ಆಧಾರದ ಮೇಲೆ ಹಣ ಕೊಡಲಾಗಿದೆ. |
| ೧೧. ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಜಾತಿವಾರು ತಾರತಮ್ಯ ನಡೆದಿರುವುದೇ? | : | ಪ್ರಾಬಲ್ಯವಿರುವ ಮತ್ತು ಬಹುಸಂಖ್ಯಾತರು ಜಾತಿಗಳ ಜನರಿಗೆ |

ಅನುಕೂಲವಾಗಿದೆ.

೧೨. ಜಿಲ್ಲೆ ಹಾಗೂ ತಾಲ್ಲೂಕು ಮಟ್ಟದ ಸಂಘ ಸಂಸ್ಥೆಗಳ ಪಾತ್ರ : ಯಾವುದು ಇಲ್ಲ.

ಸಂದರ್ಶನದ ದಿನಾಂಕ ೧೦.೩.೦೭

---

ಮೇಲಿನ ಹದಿನೈದು ಪ್ರವಾಹ ಪೀಡಿತ ಸಂತ್ರಸ್ಥರನ್ನು ಸಂದರ್ಶಿಸಿದ ಮಾಹಿತಿಯನ್ನು ವಿಶ್ಲೇಷಿಸುವದಾದರೆ, ಸರ್ಕಾರವು ಇವರ ಪುನರ್‌ವಸತಿಗೆ ಕೈಗೊಂಡ ಕಾರ್ಯಗಳು ಈ ಜನರಿಗೆ ತಲುಪುವದು ಕಷ್ಟಸಾಧ್ಯವಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದಿರುವ ಈ ಪ್ರದೇಶವು ಇಂತಹ ಪ್ರವಾಹಗಳಿಗೆ ಸಿಲುಕಿ ನಾಶವಾಗುವುದು ಕಂಡಿತ. ಪೂರ್ವನಿಯೋಜಿತ ಯೋಜನೆ ಮೇಲೆ ಸರ್ಕಾರ ಪ್ರವಾಹದಲ್ಲಿ ಮುಳುಗಡೆಯಾಗಿರುವ ಪ್ರದೇಶವನ್ನು ಸಂಪೂರ್ಣವಾಗಿ ಬೇರೆ ಪ್ರದೇಶಗಳಿಗೆ ಸ್ಥಳಾಂತರಿಸಿ ಅವರ ಸಂಸ್ಕೃತಿಗೆ ಅನುಗುಣವಾಗಿ ಮೂಲಭೂತ ವ್ಯವಸ್ಥೆಯನ್ನು ಕಲ್ಪಿಸಬೇಕಾಗಿದೆ. ಏಕೆಂದರೆ ಪ್ರತಿಯೊಂದು ಸಾಮಾಜಿಕ ವರ್ಗದ ಜನಾಂಗಕ್ಕೂ ತನ್ನದೆಯಾದ ಸಂಸ್ಕೃತಿಗಳು ತಮ್ಮ ಗ್ರಾಮಗಳ ಜೊತೆ ಬೆಸೆದುಕೊಂಡಿರುತ್ತದೆ. ಆದರೂ ಸಹ ಅಭಿವೃದ್ಧಿ ಕಾರಣಗಳಿಂದ ಇಂತಹ ಸ್ಥಳಗಳನ್ನು ಸ್ಥಳಾಂತರಿಸುವದರಿಂದ ಆ ಜನರಿಗೆ ಆಗುವಂತಹ ನಷ್ಟವನ್ನು ಸಹ ಗಮನದಲ್ಲಿ ಇರಿಸಬೇಕಾಗುತ್ತದೆ.

ಕೃಷಿ ಹಾಗೂ ಗ್ರಾಮೀಣ ಕೈಗಾರಿಕೆಯಲ್ಲಿ ಅವಲಂಬಿತವಾಗಿರುವ ಸಮಾಜ ವರ್ಗಕ್ಕೆ ಸರ್ಕಾರ ತನ್ನ ಕಾರ್ಯಕ್ರಮಗಳ ಮೂಲಕ ಪ್ರೇರಣೆ ನೀಡಬೇಕಾಗುತ್ತದೆ. ಇದಕ್ಕೆ ಸ್ಥಳೀಯ ಜಿಲ್ಲಾ ಆಡಳಿತ ಮತ್ತು ಅಧಿಕಾರಿಗಳ ಪಾತ್ರ ಹೆಚ್ಚಾಗಿ ಜವಾಬ್ದಾರಿಯುತವಾಗಿ ಕಂಡುಬರುತ್ತದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿದ ಹಲವಾರು ವಿಷಯಗಳು ಈ ಪ್ರದೇಶಕ್ಕೆ ಸ್ವಾತಂತ್ರ ಸಿಕ್ಕಿದೆಯೋ ಎಂಬ ಅನುಮಾನ ಎಷ್ಟೋ ಕಡೆ ಪ್ರಶ್ನೆಯಾಗಿಸುತ್ತದೆ. ಈ ಪ್ರದೇಶದಲ್ಲಿ ಹೆಚ್ಚಿನ ಜನೋಪಯೋಗಿ ಕೆಲಸಗಳನ್ನು ಕೈಗೊಂಡು ಈ ಪ್ರದೇಶವನ್ನ ಹೆಚ್ಚು ಅಭಿವೃದ್ಧಿ ಪಥದಲ್ಲಿ ಕೊಂಡೊಯ್ಯುವತ್ತಾ ಸರ್ಕಾರ ಹೆಚ್ಚಿನ ಗಮನಹರಿಸಬೇಕೆನಿಸುತ್ತದೆ.

# ಅಧ್ಯಾಯ ಐದು

## ಉಪಸಂಹಾರ

ಕೃಷ್ಣಾ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳು ಸಮಾಜೋ-ಆರ್ಥಿಕ ಅಧ್ಯಯನ (ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕನ್ನು ಅನುಲಕ್ಷಿಸಿ) ಎಂಬ ವಿಷಯದಲ್ಲಿ ಈ ಅಧ್ಯಯನದ ಮೂಲಕ ದೇವದುರ್ಗ ತಾಲ್ಲೂಕಿನ ರೈತರ ನೋವುಗಳ ಬಗ್ಗೆ ಮಾಹಿತಿ ಪೂರೈಸುವ ಕಿರು ಪ್ರಯತ್ನ ಇದಾಗಿದೆ. ಆಳುವ ಜನಪ್ರತಿನಿಧಿಗಳ ಅಲಕ್ಷ್ಯಕ್ಕೆ ಗುರಿಯಾಗಿರುವ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಕೃಷಿ ಬದುಕು ದುಸ್ತರವಾಗಿದೆ. ತಲೆಮಾರುಗಳಿಂದ ಭೂಮಿಯೊಂದಿಗೆ ಭಾವನಾತ್ಮಕ ಸಂಬಂಧ ಇಟ್ಟುಕೊಂಡಿದ್ದ ರೈತ ತನಗಿದ್ದ ಅಂಗುಲ ನೆಲವನ್ನೇ ಮಾರಲು ಹೊರಟಿರುವುದು ಮರುಕ ಹುಟ್ಟಿಸುತ್ತದೆ. ರೈತರ ಹೊಲಗಳಿಗೆ ನೀರು ಹಾಯಿಸಬೇಕಿದ್ದ ಕೃಷ್ಣಾ ರೈತರ ಕಣ್ಣುಗಳಲ್ಲಿ ನೀರು ಹರಿಸುತ್ತಿವೆ. ದೇವದುರ್ಗ ತಾಲ್ಲೂಕಿನಲ್ಲಿ ಪ್ರವಾಹದಲ್ಲಿ ಮುಳುಗಡೆಯಾದ ೩೬ ಗ್ರಾಮಗಳು ಚಿತ್ರಣವು ಇದಕ್ಕಿಂತ ಭಿನ್ನವಾಗಿಲ್ಲ, ಈ ತಾಲ್ಲೂಕಿನ ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ೩೬ ಗ್ರಾಮಗಳಿಗೆ ಭೇಟಿ ನೀಡಿ ಅಲ್ಲಿನ ರೈತರ ಪರಿಸ್ಥಿತಿ, ಅನುಭವಿಸಿದ ಕಷ್ಟ-ನಷ್ಟಗಳ ಬಗ್ಗೆ ಕ್ಷೇತ್ರಕಾರ್ಯ ನಡೆಯಿಸಿ ವಾಸ್ತವಿಕತೆಯನ್ನು ಅಳವಡಿಸಿ ಪ್ರಬಂಧ ಸಿದ್ಧಗೊಳಿಸಲಾಗಿದೆ. ಈ ದಿಶೆಯಲ್ಲಿ ಅಧ್ಯಯನದ ವ್ಯಾಪ್ತಿಗೆ ೬ ಅಧ್ಯಯನಗಳನ್ನೊಳಗೊಂಡಿದ್ದು, ಅವುಗಳ ಸಂಕ್ಷಿಪ್ತ ವಿವರಣೆ ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ಅಧ್ಯಾಯ ಒಂದರಲ್ಲಿ ಕೃಷ್ಣಾನದಿ ಕಣಿವೆಯ ಪ್ರದೇಶವು ೨.೫೯,೦೦೦ ಚ.ಕಿ.ಮೀ ವಿಸ್ತೀರ್ಣವಾಗಿದೆ. ಈ ಕೃಷ್ಣಾನದಿಯೂ ದಕ್ಷಿಣ ಭಾರತದ ಎರಡನೇಯ ಅತಿ ದೊಡ್ಡ ನದಿಯಾಗಿರುವುದು ಅಲ್ಲದೇ ಉತ್ತರ ಕರ್ನಾಟಕ ಪ್ರಾಂತ್ಯದ ಜೀವನಾಡಿಯಾಗಿದೆ.

ಕರ್ನಾಟಕದಲ್ಲಿ ಈ ನದಿಯೂ ೪೮೦ ಕಿ.ಮೀ ದೂರ ಹರಿಯುವುದರೊಂದಿಗೆ ಶೇ. ೫೯% ರಷ್ಟು ಜಲಾನಯನ ಪ್ರದೇಶವನ್ನು ಪ್ರತಿನಿಧಿಸುತ್ತದೆ. ಕರ್ನಾಟಕವು ಅಂತಿಮವಾಗಿ ೫೫ ಲಕ್ಷ ಹೆಕ್ಟೇರ್ ಭೂಮಿ ನೀರಾವರಿ ಸೌಲಭ್ಯ ಪಡೆಯಬೇಕಾಗಿದ್ದು, ಇದರಲ್ಲಿ ಕೇವಲ ೨೨ ಲಕ್ಷ ಹೆಕ್ಟೇರ್ ಭೂಮಿಯಲ್ಲಿ ಕೃಷ್ಣಾನದಿಯ ನೀರು ಬಳಕೆಯಾಗದೇ ವಂಚಿತವಾಗಿರುವ ಬಗ್ಗೆ. ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಮೊದಲ ಅಧ್ಯಾಯದಲ್ಲಿ ಉದ್ದೇಶ, ಮಹತ್ವ ಹಾಗೂ ವ್ಯಾಪ್ತಿ ಒಳಗೊಂಡಿದ್ದು ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳು ವಾಸ್ತವ ಬದುಕು ಬವಣೆ, ರೈತರು ಅನುಭವಿಸುತ್ತಿರುವ ಭವಣೆಗಳನ್ನು ಸಂಕ್ಷಿಪ್ತವಾಗಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ಎರಡರಲ್ಲಿ ದೇವದುರ್ಗ ತಾಲ್ಲೂಕಿನ ಕೃಷ್ಣಾನದಿಯ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸ್ಥಿತಿಗತಿ, ಕೃಷಿ ಹಾಗೂ ಕೈಗಾರಿಕೆಗಳ ಬಗ್ಗೆ ನಿಖರವಾಗಿ ಕೋಷ್ಟಕಗಳನ್ನು ನಮೂದಿಸಿ ಸ್ಪಷ್ಟೀಕರಣ ನೀಡಲಾಗಿದೆ.

ಅಧ್ಯಾಯ ಮೂರರಲ್ಲಿ ಸರಕಾರದ ಪರಿಹಾರ ಹಾಗೂ ಜನತೆಯು ಅನುಭವಿಸಿದ ಕಷ್ಟ-ಕಾರ್ಪಣ್ಯಗಳ ಬಗ್ಗೆ ಹಾಗೂ ಸರಕಾರವು ರೈತರಿಗೆ ನೀಡಿದ ಪರಿಹಾರದ ಹಣದ ವಿವರಣೆಯನ್ನು ಗ್ರಾಮಗಳ ಅನ್ವಯ ವಿವರಿಸಲಾಗಿದೆ. ರೈತರು ಅನುಭವಿಸಿದ ಹಾನಿಯ ಪ್ರಮಾಣದ ಪ್ರತಿಶತ ೧೦೦ರ ಪ್ರಕಾರ ಪಾವತಿಸಿ ರೈತರು ಆರ್ಥಿಕವಾಗಿ ಇನ್ನೂ ಸಂಕಷ್ಟಕ್ಕೆ ಗುರಿಯಾಗಿರುವವರನ್ನು ಉಲ್ಲೇಖಿಸಲಾಗಿದೆ. ದೇವದುರ್ಗ ತಾಲ್ಲೂಕಿನ ನೆರೆ ಪ್ರದೇಶಗಳಾದ ರಾಯಚೂರು, ಮಾನ್ವಿ, ಲಿಂಗಸೂರು ತಾಲ್ಲೂಕುಗಳ ಬಗ್ಗೆ ಶೈಕ್ಷಣಿಕ, ನೀರಾವರಿ, ಕೈಗಾರಿಕೆ, ಇನ್ನಿತರ ಕಾರ್ಯಗಳ ಬಗ್ಗೆ ತುಲನಾತ್ಮಕವಾಗಿ ಅಧ್ಯಯನ ಮಾಡಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳಿಗೆ ಭೇಟಿ ನೀಡಿ, ಜನರನ್ನು ಸಂದರ್ಶಿಸಿ, ಅವರ ಅಹವಾಲುಗಳನ್ನು ಆಲಿಸಿ ೨೦ ಗ್ರಾಮಗಳ ರೈತರನ್ನು ಸಂದರ್ಶಿಸಿ, ಅವರ ಹೇಳಿಕೆಗಳನ್ನು ಪಡೆದು ಪ್ರಬಂಧದಲ್ಲಿ ಅಳವಡಿಸಲಾಗಿದೆ. ಒಟ್ಟನಲ್ಲಿ ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ-ಆರ್ಥಿಕ ಅಧ್ಯಯನ ದೇವದುರ್ಗ ವಾಸ್ತವ ಬದುಕನ್ನು ಕಟ್ಟಿಕೊಡುವುದು ಈ ಅಧ್ಯಯನದ ಉದ್ದೇಶವಾಗಿದೆ.

ಒಟ್ಟಾರೆಯಾಗಿ ಈ ಅಧ್ಯಯನವು ದೇವದುರ್ಗ ತಾಲ್ಲೂಕಿನ ಪ್ರವಾಹದಲ್ಲಿ ಮುಳುಗಡೆಯಾದ ರೈತರ ಬದುಕಿನ ಸಮಾಜೋ-ಆರ್ಥಿಕ ಸ್ಥಿತಿಯ ಚಿತ್ರಣವನ್ನು ಕುರಿತು ಚರ್ಚಿಲಾಗಿದೆ. ಪ್ರವಾಹದಲ್ಲಿ ತಮ್ಮ ಭೂಮಿಯನ್ನು ಕಳೆದುಕೊಂಡು ರೈತರ ಬಗೆಗೆ ಸರಕಾರವು ತಳೆದಿರುವ ಧೋರಣೆ ಹಾಗೂ ಜನಪ್ರತಿನಿಧಿಗಳು ಕೇವಲ ರೈತರ ಸಂಕಷ್ಟಗಳನ್ನು ಪರಿಹರಿಸದೇ ಇರುವುದು ವಿಷಾದನೀಯ ಸಂಗತಿ. ಆರ್ಥಿಕ ಸಂಕಷ್ಟಕ್ಕೊಳಗಾದ ರೈತರಿಗೆ ಸಮರ್ಪಕವಾದ ಪರಿಹಾರವನ್ನು ಸಹಾಯವನ್ನು ಒದಗಿಸದೇ ಇರುವುದು ಒಂದು ವಿಪರ್ಯಾಸವೇ ಸರಿ. ಹೀಗಾಗಿ ಇಲ್ಲಿನ ರೈತರ ಬರಗಾಲ ಪ್ರವಾಹದ ಭೀಕರತೆ ಬಾಧೆಯನ್ನು ತಾಳಲಾರದೆ ಜೀವನ ನಿರ್ವಹಣೆಗಾಗಿ ನಗರ ಪಟ್ಟಣಗಳಿಗೆ ವಲಸೆ ಹೋಗುವುದು ಅನಿವಾರ್ಯಸ್ಥಿತಿ ಬಂದು ಒದಗಿದೆ. ಈ ಪರಿಸ್ಥಿತಿಯನ್ನು ತಪ್ಪಿಸಲು ಸರ್ಕಾರವು ಉದ್ಯೋಗ ಖಾತ್ರಿ ಯೋಜನೆಯನ್ನು ಜಾರಿಗೆ ತಂದಿತ್ತು. ಈ ಯೋಜನೆ ಜಾರಿಯಾಗಿ ಜಿಲ್ಲೆಯಲ್ಲಿ ಪ್ರವಾಹ ಮತ್ತು ಬರಗಾಲ ತೊಂದರೆಯಿಂದ ಜನರು ವಲಸೆ ಹೋಗುವುದನ್ನು ತಪ್ಪಿಸುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ. ದೇವದುರ್ಗ ತಾಲ್ಲೂಕಿನ ಈ ಯೋಜನೆ ಜಾರಿಯಾಗಿ ಅನೇಕ ಅಭಿವೃದ್ಧಿ ಕೆಲಸಗಳು ಜರುಗಿದ್ದು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಕಾಮಗಾರಿಗಳು ನಡೆಯಬೇಕಾಗಿದೆ ಎಂದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿಯಲಾಯಿತು.

ದೇವದುರ್ಗ ತಾಲ್ಲೂಕಿನ ಪ್ರವಾಹದ ಸಂದರ್ಭದಲ್ಲಿ ಅಂಜಳ, ಹೇರುಂಡಿ, ಮೆದುರುಗೋಳ, ಲಿಂಗದಹಳ್ಳಿಗಳಂಥ ಗ್ರಾಮಗಳು ಸ್ವಲ್ಪಮಟ್ಟಿನ ಶೈಕ್ಷಣಿಕವಾಗಿ ಪ್ರಗತಿಯಲ್ಲಿ ಕುಂಠಿತವಾಗಿರುವುದು ಕಂಡುಬರುತ್ತದೆ. ತದನಂತರ ಸರಕಾರವು ಈ ಬಗ್ಗೆ ಹೆಚ್ಚಿನ ಗಮನಹರಿಸಿ ಹೊಸ ಶೈಕ್ಷಣಿಕ ಯೋಜನೆಯನ್ನು ರೂಪಿಸಿತು. ಅದರಂತೆ ೨೦೦೪-೦೫ ಸಾಲಿನಲ್ಲಿ ದೇವದುರ್ಗ ತಾಲ್ಲೂಕಿನಲ್ಲಿ **"ವಯಸ್ಕರ ಶಿಕ್ಷಣ ಪಡೆ"** ಎಂಬ ವಿನೂತನ ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು. ಇದರಿಂದ ೧೪೦೦೦ ಸಾವಿರ ಜನರನ್ನು ಸಾಕ್ಷರರನ್ನಾಗಿ ಮಾಡುವ ಗುರಿ ಹೊಂದಿತ್ತು. ಆದರೆ ಗುಲ್ಬರ್ಗಾ ವಿಶ್ವವಿದ್ಯಾಲಯವು "ರಾಷ್ಟ್ರೀಯ ಸೇವಾ ಯೋಜನೆಯ ಘಟಕ"ದಿಂದ ಬಂದ ಮೌಲ್ಯಮಾಪನ ವರದಿಯ ಪ್ರಕಾರ ೮೧೯೮ ಜನರನ್ನು ಸಾಕ್ಷರರನ್ನಾಗಿ ಮಾಡಿದ್ದಾರೆ. ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ಕಲಿಕೆಯನ್ನು ಪೂರ್ಣಗೊಳಿಸಿದವರಿಗೆ ಗೌರವ ಸಹಾಯಧನ ನೀಡಲಾಯಿತು.

ದೇವದುರ್ಗ ತಾಲ್ಲೂಕನ್ನು ಸಾಕ್ಷರತಾ ಆಂದೋಲನ ಪ್ರಯೋಗಕ್ಕೆ ಆಯ್ಕೆ ಮಾಡಿಕೊಂಡು ಸಾಕ್ಷರತೆಯನ್ನು ಅಭಿವೃದ್ಧಿ ಪಡಿಸಲು ಅನಕ್ಷರತೆ ಹೋಗಲಾಡಿಸಲು ಜಾಥ, ಮೆರವಣಿಗೆ, ಗೊಂಬೆಯಾಟ ಮತ್ತು ಶೈಕ್ಷಣಿಕ ಆಂದೋಲನಕ್ಕೆ ಒಳಪಡಿಸಿದ ಎಲ್ಲಾ ೫

ತಾಲ್ಲೂಕಿನಲ್ಲಿ "ಅಕ್ಷರರಥ" ಸಂಚರಿಸಿ ಸಾಕ್ಷರತೆಯ ಮಹತ್ವವನ್ನು ಸಾರಿತು. ದೇವದುರ್ಗ ತಾಲ್ಲೂಕಿನ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳಲ್ಲಿ ಶೈಕ್ಷಣಿಕ ಕುಂಠಿತ ಮತ್ತು ಪ್ರಗತಿಯ ಬಗ್ಗೆ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಜನರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಪ್ರಸ್ತುತ ಸಂದರ್ಭದಲ್ಲಿ ಜಿಲ್ಲೆಯಾದ್ಯಂತ ಸುರಿದ ಕುಂಭದ್ರೋಣ ಮಳೆಗೆ ಅನೇಕ ಜಾನುವಾರುಗಳು ಆಸ್ತಿ ಬೆಳೆಹಾನಿ ನಷ್ಟ ಸಂಭವಿಸಿರುವುದು ಕೆಲವು ಹಳ್ಳಿಗಳೆಲ್ಲಾ ಜಲಾವೃತಗೊಂಡು ನೂರಾರು ಮನೆಗಳು ಕುಸಿದುಬಿದ್ದಿವೆ. ಪ್ರಮುಖ ಸೇತುವೆಗಳು ಹೂವಿನಹಡಗಿ ನೀರಿನಲ್ಲಿ ಮುಳುಗಡೆಯಾಗಿ ಗ್ರಾಮಗಳ ಮೂಲಭೂತ ಸೌಲಭ್ಯ ಹಾಗೂ ಸಂಪರ್ಕ ಅಸ್ತವ್ಯಸ್ತಗೊಂಡಿದೆ.

ಹೀಗಾಗಿ ಕೃಷ್ಣಾನದಿ ನೀರು ಹೊರಬಿಟ್ಟಾಗ ನಾರಾಯಣಪುರದ ಜಲಾಶಯದ ಒಳಹರಿವು ಹೆಚ್ಚಾಗಿರುವ ಹಿನ್ನೆಲೆಯಲ್ಲಿ. ಜಲಾಶಯ ಸಂಪೂರ್ಣ ಭರ್ತಿ ಆದಾಗಲೆಲ್ಲ ಇದರಿಂದ ಪ್ರವಾಹ ಉಂಟಾಗುವ ಸಾಧ್ಯತೆಯಿರುವುದರಿಂದ ಇಲ್ಲಿನ ಜನತೆ ಯಾವಾಗಲೂ ಪ್ರವಾಹದ ಭೀತಿಯಲ್ಲಿಯೇ ಜೀವನ ನಡೆಸುವ ಶೋಚನೀಯ ಸ್ಥಿತಿಯಲ್ಲಿದ್ದಾರೆ.

ಈಗಲಾದರೂ ಸರ್ಕಾರವು ಮುಳುಗಡೆಯಾದ ಪ್ರದೇಶದ ರೈತರ ಬಗೆಗೆ ಲಕ್ಷ್ಯವಹಿಸಬೇಕಾಗಿದೆ. ಅವರನ್ನು ಆರ್ಥಿಕ ಸಂಕಷ್ಟದಿಂದ ಮುಕ್ತಿಗೊಳಿಸಿ ಈ ತಾಲ್ಲೂಕನ್ನು ಅಭಿವೃದ್ಧಿ ಪಥದತ್ತ ಕೊಂಡೊಯ್ಯುವ ಮೂಲಕ ಅತ್ಯಂತ ಹಿಂದುಳಿದ ತಾಲ್ಲೂಕೆಂದು ಗುರುತಿಸಲ್ಪಟ್ಟಿರುವ ದೇವದುರ್ಗ ತಾಲ್ಲೂಕನ್ನು ಪ್ರಗತಿಪರ ತಾಲ್ಲೂಕುಗಳ ಸಾಲಿನಲ್ಲಿ ಗುರುತಿಸುವ ನಿಟ್ಟಿನಲ್ಲಿ ಅನೇಕ ಅಭಿವೃದ್ಧಿ ಕೆಲಸಗಳು ಜರುಗಿದ್ದು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಕಾರ್ಯಯೋಜನೆಗಳು ಪ್ರಾಮಾಣಿಕವಾಗಿ ಜಾರಿಯಾಗಬೇಕಿದೆ. ಈ ಬಗ್ಗೆ ಅಧ್ಯಯನದಲ್ಲಿ ತಿಳಿಸಲಾಗಿದೆ.

## ಗ್ರಂಥಋಣ


೧. ಡಾ. ದೇವರಕೊಂಡಾರೆಡ್ಡಿ, **ಕೃಷ್ಣಾ ಮೇಲ್ದಂಡೆ ಯೋಜನೆ ಮುಳುಗಡೆ ಗ್ರಾಮಗಳಲ್ಲಿನ ಶಾಸನಗಳ ಅಧ್ಯಯನ**, ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ. ಹಂಪಿ. ೨೦೦೫

೨. ಡಾ. ನಾಗೇಶ್ ಹೆಚ್.ವಿ **ಭಾರತೀಯ ಗ್ರಾಮ**. ಪ್ರಸಾರಾಂಗ. ಮೈಸೂರು ವಿಶ್ವವಿದ್ಯಾಲಯ. ಮೈಸೂರು, ೧೯೮೬

೩. ಡಾ. ನಾಗೇಶ ಹೆಚ್.ವಿ **ಗ್ರಾಮಾಂತರ**, ಸುಜಾತ ಪ್ರಕಾಶನ ಧಾರವಾಡ, ೧೯೮೮

೪. ಡಾ. ಯು.ಟಿ.ಅಶೋಕ. **ಕೃಷಿ ಕೂಲಿಕಾರರ ಬದುಕು; ಬವಣೆ**, ಚೇತನ ಬುಕ್‌ಹೌಸ್ ಪ್ರಕಾಶನ, ಮೈಸೂರು. ೨೦೦೧

೫. ಡಾ. ಎಚ್.ಎಂ.ಮರುಳಸಿದ್ದಯ್ಯ, **ಗ್ರಾಮೋನ್ನತಿ** ಸ್ವಸ್ತಿ ಪ್ರಕಾಶನ ಬೆಂಗಳೂರು, ೧೯೯೩

೬. ಡಿ.ವೆಂಕಟರಾವ್, **ಕೃಷಿ ಹಣಕಾಸು**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೦

೭. ಡಾ. ಎನ್.ಚಿನ್ನಸ್ವಾಮಿ ಸೋಸಲೆ, **ನಮ್ಮ ಗ್ರಾಮಗಳು ಅಂದು ಇಂದು**. ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೮. ಡಾ. ದೇವೇಂದ್ರಕುಮಾರ್ ಹಕಾರಿ ಡಾ. ಕೆ.ಆರ್.ಸಂಧ್ಯಾರೆಡ್ಡಿ (ಸಂ) **ಗ್ರಾಮೀಣ ವೃತ್ತಿಗಳು** ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು. ೨೦೦೦

೯. ಡಾ. ಕೃಷ್ಣ ಕೊತಾಯ **ಗ್ರಾಮೀಣಾಭಿವೃದ್ಧಿ ಕೆಲವು ಚಿಂತನೆಗಳು**. ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೯೮

೧೦. ಡಾ. ಜೋಗನ್‌ಶಂಕರ್, **ಗ್ರಾಮ ಸಮಾಜ**, ಜೀವ ಪ್ರಕಾಶನ. ಮೈಸೂರು. ೧೯೯೫

೧೧. ಡಾ. ಆರ್.ರಾಮಕೃಷ್ಣ, **ಮಾನವಶಾಸ್ತ್ರ**, ಲಕ್ಷ್ಮೀ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು, ೧೯೯೩

೧೨. ಡಾ. ವಿರೂಪಾಕ್ಷಿ ಪೂಜಾರಹಳ್ಳಿ, **ಜಲಸಂಬಂಧಿ ಚಳುವಳಿಗಳು**. ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೧೩. ಡಾ. ಕೆ. ಮೋಹನಕೃಷ್ಣ ರೈ, **ಪರಿಸರ ಚಳುವಳಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ. ಹಂಪಿ, ೧೯೯೯

೧೪. ಎಚ್.ಪಿ. ಶಲ್ಲಿಕೇರಿ, **ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತಿ ರಾಜ ಇಲಾಖೆಯ ಕಾರ್ಯಕ್ರಮಗಳು,** ಮಹಾಂತೇಶ ಬುಕ್ ಡಿಪೋ. ಬಾಗಲಕೋಟೆ, ೨೦೦೩

೧೫. ಡಾ. ಟಿ.ಆರ್.ಚಂದ್ರಶೇಖರ್, **ವಿಕೇಂದ್ರಿಕರಣ ತತ್ವ ಆಚರಣೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೬. ಡಾ. ಎನ್.ಚಿನ್ನಸ್ವಾಮಿ ಸೋಸಲೆ, **ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ,** ಪ್ರಕಾಶಕರು, ಸಿ.ಬಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೧

೧೭. ನೀಲತ್ತಹಳ್ಳಿ ಕಸ್ತೂರಿ, **ಕರ್ನಾಟಕದಲ್ಲಿ ಕೆರೆ ನೀರಾವರಿ,** ಕನ್ನಡ ಅನುವಾದ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೮. ಡಾ. ಸೂರ್ಯನಾಥ ಯು.ಕಾಮತ್, ಮುಖ್ಯ ಸಂಪಾದಕರು, **ಕರ್ನಾಟಕ ರಾಜ್ಯ ಗೆಜೆಟೇರಿಯರ್ ಭಾಗ ೩,** ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ೧೯೮೬

೧೯. ಡಾ. ಶ್ರೀಪತಿ ಕಲ್ಲೂರಾಮ, **ಕೃಷಿರಂಗ ಒಂದು ಅವಲೋಕನ,** ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೧೯೯೮

೨೦. ಜೆ.ಗೋ. ರಮೇಶ **ಕೃಷಿ ಉದ್ದಿಮೆಗಳು.** ನೇತ್ರಾವತಿ ಪ್ರಕಾಶನ. ಬೆಂಗಳೂರು. ೨೦೦೪

೨೧. ಡಾ. ಸೂರ್ಯನಾಥ ಯು.ಕಾಮತ್, ಮುಖ್ಯ ಸಂಪಾದಕರು. **ಕರ್ನಾಟಕ ರಾಜ್ಯ ಗ್ಯಾಸಟಿಯರ್ ಭಾಗ ಒಂದು,** ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ೧೯೮೪

೨೨. ಡಾ. ಸೂರ್ಯನಾಥ ಯು.ಕಾಮತ್, ಮುಖ್ಯ ಸಂಪಾದಕರು. **ಕರ್ನಾಟಕ ರಾಜ್ಯ ಗ್ಯಾಸಟಿಯರ್ ಭಾಗ ಎರಡು.** ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ೧೯೮೫

೨೩. ಶೇಷನಾರಾಯಣ, **ಕಾವೇರಿ,** ಕಾವ್ಯಾಲಯ ಪ್ರಕಾಶಕರು, ಮೈಸೂರು, ೨೦೦೩

೨೪. ಡಾ. ಗೋವಿಂದಯ್ಯ ಟಿ, **ರಾಜಕೀಯ ಸುಳಿಯಲ್ಲಿ ಆಲಮಟ್ಟಿ ಅಣೆಕಟ್ಟು ಭಾಗ ೧.** ಸಮಾಜ ವಿಜ್ಞಾನ ಸಂಶೋಧನ ಸಂಸ್ಥೆ, ಬೆಂಗಳೂರು, ೧೯೯೭

೨೫. ಬಿ.ಟಿ.ಲಲಿತಾ ನಾಯಕ, **ದೇವದುರ್ಗ ತಾಲ್ಲೂಕು ದರ್ಶನ.** ಐಬಿಎಚ್ ಪ್ರಕಾಶಕರು. ಬೆಂಗಳೂರು, ೧೯೮೬

೨೬. ಡಾ. ಹೆಚ್.ಚಂದ್ರಶೇಖರ್, **ಸಿರಿದುರ್ಗ,** ದೇವದುರ್ಗ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ೨೦೦೩

೨೭. **ದೇವದುರ್ಗ ದರ್ಶನ,** ದೇವದುರ್ಗ ತಾಲ್ಲೂಕು ಅಭಿವೃದ್ಧಿ ಮಂಡಳಿ, ೧೯೭೨

೨೮. ದೇವದುರ್ಗ ತಾಲ್ಲೂಕು **ಕೈಗಾರಿಕಾ ಸಮೀಕ್ಷಣಾ ವರದಿ,** ಪ್ರಕಟಣೆ ಜಿಲ್ಲಾ ಕೈಗಾರಿಕಾ ಇಲಾಖೆ, ರಾಯಚೂರು, ೨೦೦೦

೨೯. ಡಾ. ಅಮರೇಶ್ ನುಗಡೋಣಿ, **ಹೈದರಾಬಾದ್ ಕರ್ನಾಟಕದ ಹಾಡು ಪಾಡು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೩೦. ಡಾ. ಮೃತ್ಯುಂಜಯ ಹೊರಕೇರಿ, ಡಾ. ಬಸವಲಿಂಗ ಸೊಪ್ಪಿಮಠ, **ರಾಯಚೂರು ಜಿಲ್ಲಾ ದರ್ಶನ,** ೨೦೦೫

೩೧. ಡಾ. ಗೋವಿಂದಯ್ಯ ಟಿ., **ಆತಂಕದಲ್ಲಿ ಕರ್ನಾಟಕ ಅಂತರ್ಜಲ ಮತ್ತು ಗ್ರಾಮೀಣಭಿವೃದ್ಧಿ,** ಸಮಾಜ ವಿಜ್ಞಾನ ಸಂಶೋಧನ ಸಂಸ್ಥೆ, ಬೆಂಗಳೂರು, ೧೯೯೫

೩೨. ಡಾ. ಅಮರೇಶ್ ನುಗಡೋಣಿ, **ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದ್ ಕರ್ನಾಟಕ ವಿಮೋಚನ ಚಳುವಳಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೩೩. ಡಾ. ಎನ್. ಚಿನ್ನಸ್ವಾಮಿ ಸೋಸಲೆ, **ನಾಲ್ವಡಿ ಕೃಷ್ಣನ ಮೈಸೂರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೩೪. ಡಾ. ತಂಬಂಡ ವಿಜಯ ಪೂಣಚ್ಚ, **ರೈತ ಚಳುವಳಿಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೩೫. ಡಾ. ಟಿ.ಆರ್. ಚಂದ್ರಶೇಖರ್, **ಕರ್ನಾಟಕ ಅಭಿವೃದ್ಧಿ ಮಾಹಿತಿ ಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೩೬. ಎಸ್.ಆರ್.ನಾರಪ್ಪನವರ, **ಸಮಗ್ರ ಗ್ರಾಮೀಣ ಅಭಿವೃದ್ಧಿ,** ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೯೧

೩೭. ಕೆ. ಮಾರ್ಕಂಡಪ್ಪ, **ರಾಯಚೂರು ಜಿಲ್ಲೆಯ ಆರ್ಥಿಕಾಭಿವೃದ್ಧಿಯಲ್ಲಿ ತುಂಗಭದ್ರಾ ಯೋಜನೆಯ ಪಾತ್ರ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೭

೩೮. ಜಗನ್ನಾಥ ಜಾಮಾದಾರ, **ಗ್ರಾಮೀಣ ವಿಕಾಸ,** ಪ್ರಕಾಶಕರು, ಕೆ.ಎಚ್.ಪಾಟೀಲ್ ಪ್ರತಿಷ್ಠಾನ ಗದಗ, ೧೯೯೩

೩೯. ಎ.ಆರ್.ರೊಟ್ಟಿ, **ಗ್ರಾಮಾಂತರ ಪ್ರದೇಶದ ಮಾರುಕಟ್ಟೆಯ ಮಹತ್ವ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೭

೪೦. ಡಾ. ಸಿದ್ದಗಂಗಮ್ಮ, **ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೪೧. ಡಾ. ಗೋವಿಂದಯ್ಯ ಟಿ., **ಕರ್ನಾಟಕ ನೀರಾವರಿ ಅರ್ಥಶಾಸ್ತ್ರ,** ಸಮಾಜವಿಜ್ಞಾನ ಸಂಶೋಧನಾ ಸಂಸ್ಥೆ, ಬೆಂಗಳೂರು, ೧೯೯೨

೪೨. ಡಾ. ಹೀರೇಮಲ್ಲೂರು ಕೆ.ಈಶ್ವರ, **ಭಾರತದ ಹಳ್ಳಿಗಳು,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೨

೪೩. ಎ.ಟಿ.ಶ್ರೀನಿವಾಸಮೂರ್ತಿ, **ಭಾರತದ ಕೈಗಾರಿಕಾ ಯೋಜನೆ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೫

೪೪. ಡಾ. ಕೆ.ವೆಂಕಟೇಶ, ಡಾ. ಬಿ.ಸರೋಜಾ, **ಹೈದ್ರಾಬಾದ್ ಕರ್ನಾಟಕ ವರ್ತಮಾನದ ತಲ್ಲಣಗಳು,** ಪಲ್ಲವಿ ಪ್ರಕಾಶನ, ಬಳ್ಳಾರಿ, ೨೦೦೬

೪೫. ಡಾ. ತಂಬಂಡ ವಿಜಯ ಪೂಣಚ್ಚ, (ಸಂ) **ಚರಿತ್ರೆ ವಿಶ್ವಕೋಶ ೪,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೪೬. **ನಾರಾಯಣಪುರ ಬಲದಂಡೆ ಕಾಲುವೆಯ ಸಂಕ್ಷಿಪ್ತ ವಿವರಣೆ,** ಡಿಸೆಂಬರ್ ೧೯೯೫

೪೭. ಸಂದರ್ಶನಾ ಆಧಾರಿತ ಮಾಹಿತಿ

**ಇಂಗ್ಲಿಷ್ ಕೃತಿಗಳು**

1. India`s Dveloping Villlages, By G.R.Madan, Print House (India), Lucknow, 1983
2. Rural Programmes and Mangaement, Edited by M.K.Singh and Battacharya, Discovery Publishging, 1990
3. M.N.Srinivas: Dimensions of Social Change in India, (Bombay Popular 1977)
4. M.N.Srinivas: Caste in Modern India and other Essege – 1962
5. Village Empurment Report : Mysore State – 1933-34

**ಸರ್ಕಾರಿ ಪತ್ರಗಳು**

೧. ನೋಟೀಸ್ ಸಂಖ್ಯೆ ಭೂ ಸ್ವಾಧೀನ, ಸಾಮಾನೋ, ದಿನಾಂಕ ೦೨-೦೨-೨೦೦೭

೨. ಗ್ರಾಮವಾರು ಫಲಾನುಭವಿಗಳು ಮತ್ತು ಬೆಳೆನಷ್ಟ ಪರಿಹಾರದ ಸರಕಾರದ ಪತ್ರ, ೨೦೦೫-೦೬

೩. ಬರ ಮತ್ತು ನೆರೆಹಾವಳಿಯ ಪರಿಶೀಲನಾ ಸಭೆ ೨೦-೧೨-೨೦೦೬

೪. ಕರ್ನಾಟಕ ರಾಜ್ಯ ಪತ್ರ, ಡಿಸೆಂಬರ್, ೧೪-೨೦೦೬

**ದಿನಪತ್ರಿಕೆಗಳು**

೧. ಪ್ರಜಾವಾಣಿ

೨. ವಿಜಯ ಕರ್ನಾಟಕ

೩. ಸಂಯುಕ್ತ ಕರ್ನಾಟಕ

೪. ರಾಯಚೂರು ವಾಣಿ

೫. ಸುದ್ದಿ ಮೂಲ

೬. ದಿ ಹಿಂದೂ

೭. ಡೆಕ್ಕನ್ ಹೆರಾಲ್ಡ್

**ನಿಯತಕಾಲಿಕೆಗಳು**

೧. ಡಾ.ಟಿ.ಆರ್.ಚಂದ್ರಶೇಖರ್, ಡಾ.ಎಂ.ಚಂದ್ರಪೂಜಾರಿ (ಸಂ), ಅಭಿವೃದ್ಧಿ ಅಧ್ಯಯನ, ಸಂಪುಟ ೧, ಸಂಚಿಕೆ ೨, ಜೂನ್, ೨೦೦೨

೨. ಡಾ.ಎಂ.ಚಂದ್ರಪೂಜಾರಿ, ಡಾ.ಟಿ.ಆರ್.ಚಂದ್ರಶೇಖರ್. (ಸಂ), ಅಭಿವೃದ್ಧಿ ಅಧ್ಯಯನ, ಸಂಪುಟ ೨, ಸಂಚಿಕೆ ೨, ಜೂನ್, ೨೦೦೩

೩. ಡಾ.ಎಂ.ಚಂದ್ರಪೂಜಾರಿ, ಡಾ.ಟಿ.ಆರ್.ಚಂದ್ರಶೇಖರ್. (ಸಂ), ಅಭಿವೃದ್ಧಿ ಅಧ್ಯಯನ, ಸಂಪುಟ ೨, ಸಂಚಿಕೆ ೧, ಜನವರಿ, ೨೦೦೩

೪. ಎ.ಶ್ರೀಧರ್, ಸಿದ್ಧಗಂಗಮ್ಮ (ಸಂ), ಅಭಿವೃದ್ಧಿ ಅಧ್ಯಯನ, ಸಂಪುಟ ೪, ಸಂಚಿಕೆ ೧, ೨೦೦೫




ಡಾ.ದೇವರಕೊಂಡಾರೆಡ್ಡಿ, ರಾಯಚೂರು ಜಿಲ್ಲೆ ಶಾಸನ ಸಂಪುಟ ೭
ಕನ್ನಡ ವಿಶ್ವವಿದ್ಯಾಲಯ, ಹಂಪಿ




ಡಾ.ದೇವರಕೊಂಡಾರೆಡ್ಡಿ, ರಾಯಚೂರು ಜಿಲ್ಲೆ ಶಾಸನ ಸಂಪುಟ 2
ಕನ್ನಡ ವಿಶ್ವವಿದ್ಯಾಲಯ, ಹಂಪಿ




ಪ್ರವಾಹದಲ್ಲಿ ಮುಳುಗಡೆಯಾದ ಸೂರ್ಯಕಾಂತಿ ಹೊಲ



ಪ್ರವಾಹ ಹೊಡೆತಕ್ಕೆ ಗೂಗಲ್ ಗ್ರಾಮದ ರಸ್ತೆ



ಹೇರುಂಡಿ ಗ್ರಾಮದ ಪ್ರವಾಹದಲ್ಲಿ ಮುಳುಗಡೆಯಾದ ರೈತನ ಹೊಲ




ಪ್ರವಾಹದ ಹೊಡೆತಕ್ಕೆ ತುತ್ತಾದ ರೈತರು



ಪ್ರವಾಹದ ಸಂದರ್ಭದಲ್ಲಿ ಮುಳುಗಡೆಯಾದ ಲಿಂಗದಳ್ಳಿ ಗ್ರಾಮದ ನೀರು ಸರಬರಾಜು ಟ್ಯಾಂಕರ್




ಪ್ರವಾಹದ ಹೊಡೆತಕ್ಕೆ ಸಿಕ್ಕು ನೀರಿನ ಅಭಾವ ಎದುರಿಸುತ್ತಿರುವ ಗ್ರಾಮಸ್ಥರು




ನೀರಲ್ಲಿ ಮುಳುಗಡೆಯಾದ ರೈತನ ಮನೆ




ಪ್ರವಾಹದ ಪೀಡಿಗೆ ಬಲಿಯಾದ ರೈತರ ಪಂಪ್‌ಸೆಟ್‌ಗಳು




ಪ್ರವಾಹದ ಹೊಡೆತಕ್ಕೆ ತುತ್ತಾದ ಬಡರೈತನ ಗುಡಿಸಲು




ಪ್ರವಾಹದ ಹೊಡೆತಕ್ಕೆ ತುತ್ತಾದ ಬಸವಂತಪುರದ ಭತ್ತದ ಗದ್ದೆ



ಪ್ರವಾಹದಲ್ಲಿ ಮುಳುಗಡೆಯಾದ ಬಾಗೂರು ರೈತನ ಸೂರ್ಯಕಾಂತಿಯ ಹೊಲ



ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಪ್ರದೇಶಗಳು




ಮೆದರಗೋಳ ಗ್ರಾಮದ ಮುಳುಗಡೆಯಾದ ರಸ್ತೆಯ ಚಿತ್ರಣ




ತುಂಬಿ ಹರಿಯುತ್ತಿರುವ ಕೃಷ್ಣಾನದಿ




ಪ್ರವಾಹದಲ್ಲಿ ಮುಳುಗಡೆಯಾದ ಗೂಗಲ್ ಗ್ರಾಮದ ರೈತನ ಗುಡಿಸಲು




ಪ್ರವಾಹ ಪೀಡಿತ ಗ್ರಾಮಕ್ಕೆ ಅಧಿಕಾರಿಗಳ ಬೇಟಿ

